# ಸಾಕ್ಷಿ

ಸಂಚಿಕೆ 15

ಖಾಸಗಿ ಪ್ರಸಾರಕ್ಕೆ



ವಾರ್ಷಿಕ ವಿಶೇಷ
ಸಂಚಿಕೆ

# ಸಂಚಯ

ಕಲಾಸಕ್ತರ ದ್ವೈಮಾಸಿಕ

(ಖಾಸಗಿ ಪ್ರಸಾರಕ್ಕೆ)

---

ಸಂಚಿಕೆ : 15

---

ಜನವರಿ 1990

---

ಸಂಪಾದಕ :

**ಡಿ. ವಿ. ಪ್ರಹ್ಲಾದ್**

ಸಹಕಾರ :

**ನ. ರವಿಕುಮಾರ್**
**ಚಂಪಕ ಎನ್. ಎಸ್.**

ವಾರ್ಷಿಕ ಚಂದಾ : 25-00

ವಿಳಾಸ :

ನಂ. 28, 8ನೇ ಕ್ರಾಸ್
ಮಾರಮ್ಮನ ದೇವಸ್ಥಾನದ ರಸ್ತೆ
ಮಲ್ಲೇಶ್ವರಂ, ಬೆಂಗಳೂರು-560 003

---

ಮುಖಪುಟ : ರಾಮಕಿಂಕರ ಬೈ
ಕೃಪೆ : ಲಲಿತಕಲಾ ಅಕಾಡೆಮಿ


"ಕಲೆಗಾಗಿ ಕಲೆ ಬಾಲಿಶ,
ಕಲೆಗೆ ಸಾಮಾಜಿಕ ಗುರಿ ಇರಬೇಕು"

**-ಬೋದಿಲೇರ್**

**ಈ ಸಂಚಿಕೆಯಲ್ಲಿ....**

ಅ. ಲ. ನರಸಿಂಹನ್
ಅಶೋಕ ಕುಮಾರ ರಂಜೇರೆ
ರಮೇಶ್ ಚಂದ್ರ
ಮೋಹನ್ ವರ್ಣೇಕರ್
ರವಿ ಕುಮಾರ ಕಾಶಿ
ಬರಗೂರು ರಾಮಚಂದ್ರಪ್ಪ
ಕೆ. ಸಿ. ಪ್ರದೀಪ್ ಕುಮಾರ್
ಟಿ. ಎಲ್ಲಪ್ಪ
ಕೆ. ಜಯಲಕ್ಷ್ಮಿ
ಮಂಜುಳಾ ಶಿವಾನಂದ್


ಈ ಸಂಚಿಕೆಯ ಜಾಹೀರಾತುದಾರರಿಗೆ ಲೇಖಕರಿಗೆ ಮತ್ತು ಮುದ್ರಣ ನಿರ್ವಹಿಸಿದ ನೇತ್ರಾ ಪ್ರಿಂಟರ್ಸ್‌ಗೆ ಸಂಚಯದ ಧನ್ಯವಾದಗಳು.

-ಸಂ

# ಮೂರು ಹೆಜ್ಜೆಗಳು

ಡಿ. ವಿ. ಪ್ರಹ್ಲಾದ್

ಸಂಚಯಕ್ಕೆ ಮೂರು ವರ್ಷವಾಯ್ತು. ಈ ಸಂದರ್ಭದಲ್ಲಿ ನಮ್ಮ ಹೊಸ ಗೆಳೆಯರು ಅನೇಕರು ನೀವು ಏನೇನು ಮಾಡಿದ್ದೀರಿ, ಮಾಡುತ್ತಿದ್ದೀರಿ ? ಎಂದು ಕೇಳಿದಾಗ ಹೀಗೇ ಎಂದು ಒಂದೇ ಮಾತಿನಲ್ಲಿ ಉತ್ತರಿಸಲು ಆಗುವುದಿಲ್ಲ. ಆ ಕಾರಣ ಸಂಚಯದ ಸಂಕ್ಷಿಪ್ತ ಪರಿಚಯ ಈ ಲೇಖನ, ಮತ್ತು ನಾವಿಟ್ಟ ಮೂರೇ ಮೂರು ಹೆಜ್ಜೆಗಳ ಅವಲೋಕನವೂ ಹೌದು.

ನಿಜ ಹೇಳಬೇಕೆಂದರೆ ಸಂಚಯ ಯಾವುದೇ ರೀತಿಯ ಸೀರಿಯಸ್ಸಾದ ಉದ್ದೇಶಗಳನ್ನ ಇಟ್ಟುಕೊಂಡು ಆರಂಭವಾಗಲಿಲ್ಲ. ಒಂದೇ ಮನೋಭಾವದ ನಾವು ಏಳೆಂಟು ಜನ ನಮ್ಮಲ್ಲಿನ ಏನಾದರೂ ಮಾಡಬೇಕು ಎನ್ನುವ ತುಡಿತಕ್ಕೆ ರೂಪ ನೀಡಿದ್ದು ಸಂಚಯ. ನಾವು ಬರೆದದ್ದನ್ನ ನಮ್ಮ ಅಭಿಪ್ರಾಯಗಳನ್ನ ನಮ್ಮ ನಡುವೆ ಓದುವ ಚರ್ಚಿಸುವ ಚಟುವಟಿಕೆ ಈ ರೀತಿಯಲ್ಲಿ ಆರಂಭವಾಯ್ತು.

ನಾವುಗಳೂ ಬೆಳೆಯುತ್ತಾ ಹೋದಂತೆ ನಮ್ಮಗಳ ಕಾರ್ಯಕ್ರಮಗಳು ಅವುಗಳ ಔಚಿತ್ಯ ಹೆಚ್ಚು ಆಳವಾಗುತ್ತಾ ಹೋಯ್ತು. ನಮ್ಮ ಉದ್ದೇಶ ದಿನ ಕಳೆದಂತೆ ತಾನೇ ತಾನಾಗಿ ಸ್ಪಷ್ಟವಾಗುತ್ತಾ ಬಂತು. ನಮ್ಮ ನಡುವೆ ಇರುವ ಹೊಸ ಕ್ರಿಯಾಶೀಲ ಯುವ ಬರಹಗಾರರಿಗೆ ಕಲಾವಿದರಿಗೆ ನಮ್ಮ ನಡುವೆಯೇ ಬೆಳಗಲು ಒಂದಷ್ಟು ಅವಕಾಶಗಳನ್ನ ಸೃಷ್ಟಿಸಿಕೊಳ್ಳುವುದು, ನಮ್ಮ ಗುರಿಯಾಯ್ತು. ನಾವು ಬರೆದದ್ದೆಲ್ಲಾ ಸಾಹಿತ್ಯ ಎಂದು ಭ್ರಮಿಸುವ, ಕಾಳಿಗಿಂತಾ ಜೊಳ್ಳೇ ಹೆಚ್ಚಾಗುತ್ತಿರುವ ನಮ್ಮ ಸುತ್ತಲಿನಲ್ಲಿ ಪ್ರತಿಭೆಗಳು ತಮ್ಮ ಗಟ್ಟಿತನವನ್ನು ತಿಳಿವನ್ನ ಬೆಳೆಸಿಕೊಳ್ಳುವುದು ಇವತ್ತಿನ ಜರೂರು ಅಗತ್ಯ. ಅದಕ್ಕಾಗಿ ಈ ಗರಡಿ ಸಿದ್ಧವಾಯ್ತು. ಆ ದಿಕ್ಕಿನಲ್ಲೇ ಪ್ರಯತ್ನಿಸುತ್ತಿದೆ.

ನಮ್ಮ ಚಟುವಟಿಕೆ ಹೆಚ್ಚು ವಿಸ್ತಾರವಾದಂತೆಲ್ಲಾ ನಮ್ಮ ಗುಂಪು ಕ್ರಮೇಣ ದೊಡ್ಡದಾಗತೊಡಗಿತು. ಅನೇಕರು ನಮ್ಮ ಜೊತೆಗೂಡಿದರು, ಜೊತೆ ಬಿಟ್ಟರು. ಅನೇಕ ಸಹೃದಯರು ನಮ್ಮ ಚಟುವಟಿಕೆಗಳನ್ನ ಮೆಚ್ಚಿ ಪ್ರೋತ್ಸಾಹಿಸಿದರು. ಇದೆಲ್ಲದರ ಜೊತೆ ನಾವು ನಮಗೆರಡು ಕೋಡು ಬಂದಂತೆ ಬೀಗಿದ್ದೂ ನಿಜ. ಅದರ ಜೊತೆ ಜೊತೆಗೇ ನಮ್ಮಗಳ ಅನೇಕ ಕಾರ್ಯಕ್ರಮಗಳು ಉತ್ಸಾಹದಿಂದ ಯೋಚಿಸಿ ಒದ್ದಾಡಿ ಪ್ರಯತ್ನಿಸಿದ್ದರೂ ಅವು ಯಶಸ್ವಿಯಾಗದೇ ಹೋದಾಗ ನಮ್ಮ ಉತ್ಸಾಹ ಕುಗ್ಗಿದ್ದೂ ಉಂಟು. ಹೀಗೇಕೆ ಒದ್ದಾಡಬೇಕು ? ಎನ್ನುವ ಅನಿಸಿಕೆ ಬಾರದೇ ಇರಲಿಲ್ಲ.

ದೊಡ್ಡವರೆನಿಸಿಕೊಂಡ ಕೆಲವರ ಸಣ್ಣತನ, ದ್ವೇಷ, ನಮಗೂ ಬಿಸಿ ತಾಗಿಸಿ ವಾಸ್ತವದ ಅರಿವು ಮೂಡಿಸಿತು. ಯಾರೇ ಆಗಲಿ ಇವತ್ತಿನ ದಿನಗಳಲ್ಲಿ ಅದರಲ್ಲೂ ಬೆಂಗಳೂರಿನಂಥಾ ನಗರದಲ್ಲಿ ಯಾವುದಾದರೂ ಸಭೆ ಕಾರ್ಯಕ್ರಮ ನಡೆಸಲು ತುಂಬಾ ಕಠಿಣ ಪರಿಸ್ಥಿತಿ ಇದೆ. ಜನರ ಪ್ರತಿಕ್ರಿಯೆ ಹಾಗಿರಲಿ, ಕಾರ್ಯಕ್ರಮದ ಖರ್ಚು ವೆಚ್ಚ ಕರೆದವರ ಜಂಭ ಇದನ್ನೆಲ್ಲಾ ತೂಗಿಸುವುದು ಒಂದು ಸಾಹಸದ ಕೆಲಸ. ಇಷ್ಟರ ನಡುವೆಯೂ ನಮ್ಮ ಜೊತೆ ಸರಳವಾಗಿ ಮುಗ್ಧವಾಗಿ ಬೆರೆಯುವ ಉದಾರ ಮನಸ್ಸಿನವರೂ ಇರುವುದು ಒಂದು ಸಂತಸದ ವಿಷಯ. ಅಂಥವರ ಕಾರಣದಿಂದಲೇ ಈ ರೀತಿಯ ಚಟುವಟಿಕೆಗಳು ಒಂದಿಷ್ಟು ಜೀವ ಪಡೆಯುತ್ತಿವೆ.

ಈವರೆಗೆ ನಾವು ನಡೆಸಿರುವ ಕಮ್ಮಟಗಳು, ವಿಚಾರ ಸಂಕಿರಣಗಳು, ಚರ್ಚೆ, ಪತ್ರಿಕೆ, ಇವೆಲ್ಲಾ ನಾವು ಅಪ್ರಯೋಜಕ ಕೆಲಸ ಮಾಡಿಲ್ಲ ಎನ್ನುವ ನಂಬಿಕೆ ತಂದಿದೆ. ಗ್ರಂಥ ಲೋಕದಲ್ಲಿ ಹೆಚ್. ಎಸ್. ವೆಂಕಟೇಶ ಮೂರ್ತಿಯವರು ಸಂಚಯದ ಬಗ್ಗೆ, ಸಂಚಯದ ಮಾದರಿಯ ಸಣ್ಣ ಗುಂಪುಗಳ ಚಟುವಟಿಕೆಗಳ ಬಗ್ಗೆ ಬರೆಯುತ್ತಾ ... "ಕೋಟ್ಯಾಂತರ ರೂಪಾಯಿ ವಹಿವಾಟುಳ್ಳ ಸಂಸ್ಥೆಗಳು ಮಾಡಲಾಗದ್ದನ್ನು, ಇಂಥ ಚಿಕ್ಕ ಪುಟ್ಟ ಸಂಸ್ಥೆಗಳು ಮಾಡುತ್ತವೆ ಎಂದು ನಾನು ಭಾವಿಸುತ್ತೇನೆ. ಇಂಥ ಕಡೆ ಬೇರೆಯವರಿಗೆ ಏನನ್ನಾದರೂ ತೋರಿಸುವ ಮೋಹ ಇರುವುದಿಲ್ಲ. ತಮ್ಮನ್ನು ತಾವು ನೋಡಿಕೊಳ್ಳುವ ಆಸೆ ಇರುತ್ತದೆ. ಸಣ್ಣ ಸಂಸ್ಥೆಗಳಲ್ಲಿ ಮಾತ್ರ ಸಾಧ್ಯವಾಗುವ ವೈಯುಕ್ತಿಕ ಸ್ಪರ್ಷ ಇರುತ್ತದೆ. ಚದುರಿ ಹೋಗುವ, ಛಿದ್ರಗೊಳ್ಳುವ ಮನಸ್ಸುಗಳನ್ನು ಇಲ್ಲಿ ಜೋಡಿಸಿಕೊಳ್ಳುವುದು ಸಾಧ್ಯ! ಅಂತರಂಗದ ಶಕ್ತಿಯನ್ನ ಶೋಧಿಸಿಕೊಳ್ಳುವುದು ಸಾಧ್ಯ. ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲು ಸಾಧ್ಯ ; ಸಂಚಯ, ಸ್ಫುರಣ ವಿಕಸನ ಪರಸ್ಪರ ಎಂಬ ಹೆಸರುಗಳೇ ಅದನ್ನ ಸೂಚಿಸುತ್ತಿವೆ..."

(ಗ್ರಂಥಲೋಕ /ಫೆಬ್ರವರಿ88)

ಈ ಮಾತುಗಳಂತೆ ಸಣ್ಣ ಗುಂಪುಗಳಲ್ಲಿ ಸಾಧ್ಯವಾಗುವ ವೈಯಕ್ತಿಕ ಸ್ನೇಹದ ಸ್ಪರ್ಶ ಬಂಧನಗಳು ನಮ್ಮನ್ನ ಗಟ್ಟಿಗೊಳಿಸಿದೆ. ಚದುರಿ ಹೋಗುವ ಛಿದ್ರಗೊಳ್ಳುವ ಮನಸ್ಸುಗಳು ಇಲ್ಲಿ ಜೊಡಿಸಿಕೊಂಡಿದೆ. ನಮ್ಮನ್ನ ನಾವು ನೋಡಿಕೊಳ್ಳುವ ಆಸೆಯೇ, ಅನೇಕ ಜನರಿಗೆ ನಾವು ಮೂರು ವರ್ಷಗಳಿಂದ ಈ ಚಟುವಟಿಕೆ ನಡೆಸುತ್ತಿದ್ದೇವೆ ಎನ್ನುವುದು ಕೇಳಿ ಆಶ್ಚರ್ಯ ಮೂಡಿಸಿದೆ. ನಮ್ಮ ಈ ಪುಟ್ಟ ಗುಂಪು ಯಾವುದೇ ವಿಚಾರದ ಪರವಾಗಿ ಅಥವಾ ವಿರೋಧವಾಗಿ ತನ್ನನ್ನ ತಾನು ಗುರ್ತಿಸಿಕೊಳ್ಳದೇ, ನಿರ್ಲಿಪ್ತವಾಗಿ ಆರೋಗ್ಯಕರ ಚರ್ಚೆ ಸಂವಾದಗಳ ಮೂಲಕ ನಮ್ಮಗಳ ಸಾಹಿತ್ಯದ ಬಗೆಗಿನ ಅರ್ಥವನ್ನ ವಿಸ್ತರಿಸಿಕೊಳ್ಳುವ ಯತ್ನ ನಡೆಸುತ್ತಿದೆ. ನಿಮಗೂ ಇದು ಇಷ್ಟವಾದರೆ ಬನ್ನಿ ; ಭಾಗವಹಿಸಿ.

●

# ಸಾವು

ಕೆ. ಸಿ. ಪ್ರದೀಪ್ ಕುಮಾರ್
ಟೆಕ್ನೀಷಿಯನ್, ಸೆಂಟ್ರಲ್ ಟೆಲಿಗ್ರಾಫ್ ಆಫೀಸು, ರಾಜಭವನ ರಸ್ತೆ, ಬೆಂಗಳೂರು-1

ಸಾವು ನುಂಗುವುದು ಮಾತು
ಮೌನದೊಳಗೆ ಕಾವು ಕೂತು
ಬೆಳಕಿನೊಳಗೆ ಅಡಗಿದಂತೆ ನೆರಳು

ಜಾದೂಗಾರನ ಬೋಸಿಯಲಿ ಆವಿಯಾಗುವ ಜಲ
ಫಲ ಕಳಿತು ಅರಿವಿರದೆ ನೆಲ ಸೇರುವ ದಳ
ಹಿಡಿಯೊಳಗೆ ತುಂಬಿದ ಹಣ್ಣೊಳಗೆ
ರೆಪ್ಪೆ ಮಿಟಕಿನೊಳಗೆ ಬಂದು
ಪರೀಕ್ಷಿತನ ಹುಳ

ಮಾಡಿರದ ಅಂಬರದೊಳಗೆ
ಜೀಕುತಿದೆ ಜೀವ ಜಂಗಮದಲ್ಲಿ
ಅದೇಸು ಬಾರಿ ಕವುಚಿದ ಕೌದಿ
ಎಳೆ ಎಳೆಯಾಗಿ ಮಿಲಗುಟ್ಟಿಸಿದೆ ಗೂಗೆ ಘುಕ್ಕಿಗೆ
ಮೊರೆ ಇಟ್ಟದೆ ಬೆಚ್ಚಗಿನ ಎದೆಗಳಿಗೆ
ಘಳಿಗೆ ಘಳಿಗೆ ಹರಿದು
ಬಂದು ಕುಂತರೂ ಹಕ್ಕಿ
ಕಾಯುವುದು ಜೀವ ಕಾಂಡದೊಳಗೆ
ಒಂದೊಂದೇ ಉಂಗುರಗಳ ಸೇರಿಸಿ
ಬೆಳಗಿನ ಕೋಳಿಗೆ ಕನವರಿಸಿ.

# ಚಿತ್ರಕಲೆಯಲ್ಲಿ ಸಮಕಾಲೀನ, ಆಧುನಿಕ ಇತ್ಯಾದಿ

ಅ. ಲ. ನರಸಿಂಹನ್
ನಂ. 13, ಹಳೆಯ ದೇವಸ್ಥಾನದ ರಸ್ತೆ
15ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-3

ಕರ್ನಾಟಕ ಚಿತ್ರಕಲೆಯ ಇತಿಹಾಸದಲ್ಲಿ ಹಲವಾರು ಘಟ್ಟಗಳನ್ನು ಈಗಾಗಲೇ ಗುರುತಿಸಿದೆ. ಉಳಿದಂತೆ ಭಾರತೀಯ ಚಿತ್ರಕಲೆಯಲ್ಲಿ ಇರುವಂತೆಯೇ ಇಲ್ಲಿಯೂ ಪರಂಪರೆಯೊಂದು ಬೆಳೆದು ಬಂದಿದೆ. ಚಾಳುಕ್ಯ, ಹೊಯ್ಸಳರ ತನಕ ಶಿಲ್ಪಕಲೆಯೂ ನಂತರ ದಖ್ಖನಿ, ವಿಜಯನಗರ, ಮೈಸೂರು ಅರಸರ ಕಾಲದಲ್ಲಿ ಚಿತ್ರಕಲೆಯೂ ತನ್ನ ಕಾಣಿಕೆಯನ್ನು ನಾಡಿಗೆ ನೀಡಿದೆ. ಈ ಶತಮಾನದ ಆರಂಭದಲ್ಲಿ ಇನ್ನೂ ಮೈಸೂರು ಸಂಪ್ರದಾಯ ಶೈಲಿ ಊರ್ಜಿತಾವಸ್ಥೆಯಲ್ಲಿ ಇದ್ದಾಗಲೇ ರವಿವರ್ಮನ ಆಗಮನ, ಯೂರೋಪಿನ ನೈಜವಾದದ ಪ್ರಭಾವ, ಭಾರತೀಯ ಹವಾಮಾನಕ್ಕೆ ಒಗ್ಗದ ತೈಲ ವರ್ಣಗಳು, ಪಾಶ್ಚಿಮಾತ್ಯ ಸಂಯೋಜನೆಯಲ್ಲಿ ದೇಶೀಯ ದೇವ-ದೇವಿಯರು, ಇತ್ಯಾದಿಗಳು ಬಂದು ಚಿತ್ರಕಲೆಯ ಇತಿಹಾಸದಲ್ಲಿ ಭಾರಿ ತಿರುವು ಉಂಟಾಯಿತು. ಇವುಗಳೊಂದಿಗೆ 1. ಸಾಮಾಜಿಕ ವಸ್ತುಗಳನ್ನು ಚಿತ್ರಕಲೆಯಲ್ಲಿ ರಚಿಸಬಹುದು ಎಂಬ 2. ಕಲಾವಿದ ತಾನು ರಚಿಸಿದ ಹಲವು ಚಿತ್ರಗಳನ್ನು ಒಂದೆಡೆ ಪ್ರದರ್ಶಿಸ ಬಹುದು ಎಂಬ 3. ನೋಡುಗನಿಗೂ ಇಂತಹ ಪ್ರದರ್ಶನಗಳಿಗೆ ಹೋಗಿ ನೋಡ ಬೇಕು. ಕಲೆಯಾಗಿ ಆಸ್ವಾದಿಸಬೇಕು ಎಂಬ 4. ಮೂಲ ಚಿತ್ರವಲ್ಲದಿದ್ದರೂ ಅದರ ಮುದ್ರಿತ ಪ್ರತಿಯನ್ನಾದರೂ ಕೊಂಡು ಮನೆಯಲ್ಲಿ ಅಲಂಕರಿಸಿಕೊಳ್ಳಬೇಕೆಂಬ ಇತ್ಯಾದಿ ಭಾವನೆಗಳು ಬಂತು. ಸಂಪ್ರದಾಯವಾಗಿ ವಂಶಪಾರಂಪರ್ಯವಾಗಿ ಚಿತ್ರ ರಚಿಸುತ್ತಿದ್ದವರಲ್ಲಿ 1. ನೈಜವಾದದ (ರಿಯಲಿಸಂ) ಚಿತ್ರವನ್ನು ತಾವೂ ರಚಿಸ ಬೇಕೆಂಬ 2. ಅದರ ತಂತ್ರ ತಿಳಿಯಬೇಕೆಂಬ 3. ತನಗೂ ಆ ಮಾಧ್ಯಮದಲ್ಲಿ ಹೇಳಬೇಕಿರುವುದು ಇದೆಯೆಂಬ 4. ಅಂಥ ಚಿತ್ರಗಳಿಗೆ ಮಾರುಕಟ್ಟೆಯಿದೆ ಎಂಬ (ಆಗ ಮಹಾರಾಜರೇ ಮುಖ್ಯ ಪೋಷಕರಾಗಿದ್ದರು) ವಿಶ್ವಾಸ, ನಂಬಿಕೆಗಳು ಬಂದವು. ಸಾಮಾಜಿಕವಾಗಿ ಶಾಲೆಗಳಲ್ಲಿ ಚಿತ್ರಕಲೆಯನ್ನು ಪಠ್ಯ ವಿಷಯವಾಗಿ ಸೇರಿಸಬೇಕೆಂದಲ್ಲದೆ ಚಿತ್ರಕಲೆಯನ್ನೇ ಪ್ರತ್ಯೇಕ ವಿದ್ಯಾಭ್ಯಾಸವಾಗಿ ನೀಡಲು ಸಾಧ್ಯ ಹಾಗು ಅವಶ್ಯ ಎಂಬ ವಿಚಾರ ಬಂತು. ಈ ಕಲೆಯನ್ನು ಯಾವುದೇ ವರ್ಗ, ಜಾತಿ, ಪರಂಪರೆಗಳಿನ್ನದೆ ಯಾರೇ ಬೇಕಾದರೂ ಕಲಿಯಬಹುದು ಎಂಬಂತಾಗಿದ್ದು ಚಿತ್ರಕಲೆಯ ಇತಿಹಾಸದಲ್ಲಿ ಮಹತ್ವದ ತಿರುವು ಎಂದರೆ ಕಲಾವಿದರು, ಪೋಷಕರು, ಗ್ರಾಹಕರು ಇತ್ಯಾದಿಯಾಗಿ ಎಲ್ಲರೂ ಹೊಸ ಬೆಳವಣಿಗೆಯನ್ನು ಸ್ವಾಗತಿಸಿದರು. ರವಿವರ್ಮನ ಬಗ್ಗೆ ಆಕ್ಷೇಪ

ವೆತ್ತಿದ್ದು ಆತನ ಕೆಲವು ಚಿತ್ರಗಳ ವಸ್ತುನಿರ್ವಹಣೆಯನ್ನು ಕುರಿತೇ ವಿನಹ ಆತನ ತಂತ್ರ (ಟೆಕ್ನಿಕ್) ಅಥವ ಹೊಸ ಪ್ರಯೋಗಗಳ ಬಗ್ಗೆ ಅಲ್ಲವೆಂಬುದು ಗಮನಾರ್ಹ. ಬಂಗಾಳದ ಜಲವರ್ಣದ ತಂತ್ರಗಾರಿಕೆ (ವಾಷ್ ಮೆಥೆಡ್)ಯಲ್ಲಿ ಕಂಡುಬರುವಂತೆ ನವಿರಾದ ರೇಖೆ ರವಿವರ್ಮನಲ್ಲಿ ಕಂಡು ಬರುವುದಿಲ್ಲವೆಂದು ಅನೇಕರು ಆಪಾದಿಸುತ್ತಾರೆ. ಆದರೆ ಬಂಗಾಳದಲ್ಲಿ ಬಂದ ನೀರು ಬಣ್ಣವನ್ನು ಪದರ ಪದರವಾಗಿ ಹಚ್ಚುವ ಕಲೆಗಾರಿಕೆ ಕೂಡ ಮೂಲತಃ ಭಾರತದಲ್ಲ. ಚೈನ, ಜಪಾನ್ ಕಡೆಯದು. ಬಂಗಾಳಿ ಕಲಾವಿದರು ಈ ತಂತ್ರದಲ್ಲಿ ಅಜಂತೆಯಂತೆ ನೀಳವಾಗಿ, ಸಪೂರವಾಗಿ, ಸುಕೋಮಲ, ಶೃಂಗಾರ ಪರವಾಗಿ ಆಕೃತಿಗಳನ್ನು ಇರಿಸಿದ್ದು ಅದನ್ನೇ ಭಾರತೀಯತೆ ಎಂದು ಭ್ರಮಿಸಿದರು. ಶಾಂತಿನಿಕೇತನಕ್ಕಿಂತ ಭಿನ್ನವಾದ ಕಲ್ಕತ್ತೆಯಲ್ಲಿ ಕಲಿತು ಬಂದ ವೆಂಕಟಪ್ಪ ತಮ್ಮ 'ಶಿಷ್ಯ'ರೆಂದು ಯಾರನ್ನೂ ಸ್ವೀಕರಿಸದೇ ಹೋದುದು. ಇಲ್ಲಿಯ ಕಲಾವಿದರೂ ಜಲವರ್ಣ ಮಾಧ್ಯಮದಲ್ಲಿ ರಚಿಸಿದರೂ ಬಂಗಾಳಿ ಶೈಲಿಯನ್ನು ಒಗ್ಗಿಸಿಕೊಳ್ಳದೇ ತೈಲ ಹಾಗೂ ನೈಜ ಶೈಲಿಗೆ ಒಲಿದಿದ್ದು ಆಕಸ್ಮಿಕವಿರಲಾರದು. ಈ ಪರಿಸ್ಥಿತಿ ಈ ಶತಮಾನದ ಅರ್ಧದವರೆಗೂ ಮುಂದುವರಿಯಿತು.

ಸರಿ ಸುಮಾರಾಗಿ ಸ್ವಾತಂತ್ರ್ಯದೊಂದಿಗೇ ಇನ್ನೊಮ್ಮೆ ಚಿತ್ರಕಲೆಯಲ್ಲಿ ಬದಲಾವಣೆಗಳು ಕಂಡು ಬಂದಿತು. ಕರ್ನಾಟಕದ ಮಟ್ಟಿಗೆ ಇನ್ನು ಹತ್ತು ವರ್ಷ ಎಂದರೆ 'ವಿಶಾಲ ಕರ್ನಾಟಕ'ದ ವರೆಗೆ ಕಾಯಬೇಕಾಯಿತು. ಈ ಹೊಸ ಬದಲಾವಣೆಗೆ 'ನವ್ಯ' ಎಂಬ ಹಣೆ ಪಟ್ಟಿ ಹಚ್ಚಿಕೊಂಡಿತು. ಐವತ್ತು ವರ್ಷಗಳ ಹಿಂದೆ ಯಾವ ಹೊಸತೊಂದನ್ನು ಜನ, ಕಲಾವಿದ, ಪೋಷಕರು ಸ್ವಾಗತಿಸಿದರೋ ಈಗ ಬಂದ ಹೊಸದನ್ನು ಅಷ್ಟೇ ಆದರದಿಂದ ಬರಮಾಡಿಕೊಳ್ಳಲಿಲ್ಲ. ಇದಕ್ಕೆ ಕಾರಣ ಹುಡುಕುತ್ತಾ ಹೋದರೆ ಪರಸ್ಪರ ದೋಷಣೆಯೇ ದೊರೆಯುತ್ತದೆ. ಕೆಲವೇ ಕಲಾವಿದರು ರಚಿಸುವ, ಯಾವುದೊ ಒಂದು ಮನೋಭಾವದ ಜನರಷ್ಟೇ ನೋಡುವ, ಕೆಲವರಷ್ಟೇ ಕೊಳ್ಳಲು ಸಾಧ್ಯವಾಗುವ ಆಧುನಿಕ ಚಿತ್ರ ಶಿಲ್ಪಗಳು ಯಾರಿಗಾಗಿ ? ಯಾತಕ್ಕಾಗಿ ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಇವುಗಳನ್ನು ಈ ರೀತಿ ಪಟ್ಟಿ ಮಾಡಬಹುದು.

ಚಿತ್ರದ ವಸ್ತು : ಚಿತ್ರ ಎಂದಾಕ್ಷಣ ಅದರಲ್ಲಿ 'ಅರ್ಥವಾಗು'ವಂತಹ ವಸ್ತು ಇರಬೇಕು. ಅದನ್ನು ಕಂಡು ಅದರ ಹಿಂದೆ ಇರಬಹುದಾದ ಕಥೆ, ಘಟನೆ ಇತ್ಯಾದಿಗಳನ್ನು ಹೋಲಿಸಿ 'ರಸಾನುಭವ' ಪಡೆಯಬೇಕು ಎಂಬುದು ನೋಡುಗ ಅಪೇಕ್ಷಿಸುತ್ತಾನೆ. ಅದಕ್ಕೆ ಕಾರಣ ಅದುವರೆವಿಗೂ ಕಲೆ ಮಾಡುತ್ತಿದ್ದ ಕೆಲಸವೇ ಅದು. ಮುಖ್ಯವಾಗಿ ಪೌರಾಣಿಕ, ನಂತರ ಅವುಗಳಲ್ಲಿಯ ಉಪಕಥೆಗಳಿಗೆ ಪೂರಕ ಚಿತ್ರವಾಗಿ (ಇಲಸ್ಟ್ರೇಷನ್) ಬರುತ್ತಿತ್ತು. ಈಗ ಚಿತ್ರಿತ ಆಕೃತಿ ಗುರಿತಿಸಬಹುದಾಗಿದ್ದರೂ ನೋಡುಗ ಅವುಗಳಿಗೆ ಹಿನ್ನೆಲೆಯನ್ನು ಬಯಸುತ್ತಾನೆ. ಅದು ದೊರೆಯದಿದ್ದರೆ ನಿರಾಕರಿಸುತ್ತಾನೆ. ಹಿಂದೆ ಕೃತಿಯಲ್ಲಿ ಒಟ್ಟು ಸಂಯೋಜನೆಯೇ ಮುಖ್ಯ

ವಾಗಿತ್ತು. ಉಳಿದಂತೆ ಭೂದೃಶ್ಯ, ಭಾವಚಿತ್ರ ಇತ್ಯಾದಿಗಳು ಗೌಣವಾಗಿತ್ತು. ಈಗ ಅವುಗಳನ್ನೇ ಪ್ರತ್ಯೇಕಿಸಿ ಇರಿಸಿದಾಗ ನೋಡಲು, ಆಸ್ವಾದಿಸಲು ಹಿಂಜರಿದ. ಈ ಬಗೆಯ ಚಿತ್ರ ರಚನೆಯ ಕಲ್ಪನೆಯೇ ಅನೇಕರಿಗೆ ಇಲ್ಲ.

ನೋಡುಗ : ಈತನನ್ನು ಪ್ರೇಕ್ಷಕ, ಸಹೃದಯಿ ಎಂದು ಕರೆಯ ಬಹುದು. ಮೊದಲಿಗೆ 'ಚಿತ್ರಪಟ' ಆತನಿಗೆ ಒಂದು ಪೂಜಾ ವಸ್ತುವಾಗಿತ್ತು. ಇಂದಿಗೂ ದೇವರ ಮನೆಯಲ್ಲಿಯ ಚಿತ್ರಪಟಗಳು ಮುದ್ರಿತವಾಗಿದ್ದರೂ ಮೂಲತಃ ಬರೆದ ಚಿತ್ರಗಳೇ ನಂತರ ವಸ್ತುಸಂಗ್ರಹಾಲಯಗಳಲ್ಲಿ ಕಂಡರೂ ಅದರಲ್ಲಿಯ ವಸ್ತು ವನ್ನು, ಬೇರೆ ಬೇರೆ ಶೈಲಿಯನ್ನು, ಬೇರೆ ಬೇರೆ ಕಾಲದವುಗಳನ್ನು ಗುರುತಿಸಿ ತೃಪ್ತ ನಾಗುತ್ತಿದ್ದ. ನವ್ಯದಲ್ಲಿಯ ಹೊಸ ಸಂಕೇತಗಳು, ಸ್ಫೋಟಗೊಳ್ಳುವ ಧ್ವನಿಗಳು, ವ್ಯಂಗ್ಯ ವಿಡಂಬನೆಗಳು ಅರ್ಥ ಮಾಡಿಕೊಳ್ಳುವ ವ್ಯವಧಾನ, ತಾಳ್ಮೆ, ಅದಕ್ಕಿಂತ ಕುತೂಹಲ ಆತನಲ್ಲಿ ಮೂಡಲೇ ಇಲ್ಲ. ಆ ಬಗ್ಗೆ ಪ್ರಯತ್ನಿಸಲೂ ಇಲ್ಲ.

ಗ್ರಾಹಕ : ಈತ ನೋಡುಗ ಹಾಗೂ ಸಹೃದಯರಿಗಿಂತ ಭಿನ್ನ. ಈತ ಕಲೆಯ ರಸಾಸ್ವಾದನೆ ಮಾಡಿದರೂ ವ್ಯಾಪಾರೀ ದೃಷ್ಟಿಯುಳ್ಳವನು. ತನ್ನಲ್ಲಿ ಕಲಾಕೃತಿಯೊಂದಿದೆ ಎಂದಾಗಲೇ ಅಥವಾ ತನ್ನ 'ದಿವಾನ ಖಾನೆಯ ಅಂದ ಚಂದ' ಕ್ಕಾಗಿ ಕೊಂಡಿದ್ದೇನೆ ಎನ್ನುವುದಕ್ಕಿಂತ ಸರೀಕರಲ್ಲಿ "ಇಂತಹ" ಪ್ರಸಿದ್ಧ ಕಲಾವಿದನ 'ಇಷ್ಟು' ಮೌಲ್ಯದ ಕೃತಿ ತನ್ನಲ್ಲಿದೆ ಎಂಬ ಧೋರಣೆಯೇ ಹೆಚ್ಚು. ಪಾಶ್ಚಾತ್ಯರಂತೆ ಕೃತಿಗಳ ಮರು ಮಾರಾಟ ಭಾರತದಲ್ಲಿ ಇಂದಿಗೂ ಅಸಾಧ್ಯ. ಕೆಲವೊಮ್ಮೆ ಕೃತಿಗಳ 'ಬೆಲೆ' ನೋಡಿದರೆ ಗ್ರಾಹಕನ 'ವ್ಯಯ'ದ ಬಗ್ಗೆ ಅನುಮಾನ ಬರುವುದುಂಟು. ಆದರೆ ಚರಿತ್ರೆಯ ಪುಟಗಳಲ್ಲಿ ಗಮನಿಸಿದರೆ ಕಲಾಕೃತಿಗಳು ಎಂದೂ ದುಬಾರಿಯೇ. ಕಲಾಕೃತಿಯ ವಸ್ತು, ಶೈಲಿಗಳಿಗಿಂತ ಸದರಿ ಚಾಲ್ತಿಯಲ್ಲಿರುವ ಕಲಾವಿದನ ಕೃತಿ ತಮ್ಮಲ್ಲಿಯೂ ಇದೆ ಎಂಬ ಹೆಮ್ಮೆಯೇ ಗ್ರಾಹಕನಿಗೆ ಮುಖ್ಯ.

ವ್ಯಾಪಾರಿ ಅಥವಾ ಮಧ್ಯವರ್ತಿ : ಕಲಾವಿದ ಹಾಗೂ ಗ್ರಾಹಕರ ಮಧ್ಯೆ ಇಂತಹ ವ್ಯಕ್ತಿಯೊಬ್ಬ ಮೊದಲು ಇರಲಿಲ್ಲ. ಕರ್ನಾಟಕದಲ್ಲಿ ಈಚೆಗೆ ಮುಖ್ಯ ವಾಗಿ ಪಂಚತಾರಾ ಹೋಟೆಲುಗಳು ಈ ವ್ಯವಸ್ಥೆ ಮಾಡಿದ್ದು ಗ್ರಾಹಕರ 'ಅಭಿರುಚಿ' ಯನ್ನು ಇವೇ ನಿರ್ಧರಿಸುವಂತಿದೆ. ಇಲ್ಲಿಯೂ ಆಯ್ದ ಚಿತ್ರಗಳನ್ನು ಪ್ರದರ್ಶಿಸಿ ಮಾರಾಟ ಮಾಡಿನೋಡಿ ಮುರಿದು ಕಲಾವಿದನಿಗೆ ಪಾವತಿಯಾಗುವುದೇ ವಿನಹ, ಪಾಶ್ಚಾತ್ಯರಲ್ಲಿಯಂತೆ ತಾವು 'ದತ್ತು' ತೆಗೆದುಕೊಂಡ ಕಲಾವಿದನಿಗೆ ಕಲಾ ಚರಿತ್ರೆಯಲ್ಲಿ ಸ್ಥಾನ ನೀಡುವ ಕೆಲಸ ಈ ವ್ಯಾಪಾರಿಗಳು ಮಾಡುವುದಿಲ್ಲ. ಕಲಾಕೃತಿಗಳನ್ನು ಹರಾಜು ಹಾಕುವುದೂ ದೂರದ ಮಾತು. ಕಲಾ ಪರಂಪರೆ, ಕಲಾ ಚರಿತ್ರೆ, ಕಲಾವಿದನ ವೈಯಕ್ತಿಕ ಜೀವನ ಮತ್ತು ಕಲಾ ತಂತ್ರ (ಬಣ್ಣಗಾರಿಕೆ, ಕುಂಚದ ಬೀಸು ಇತ್ಯಾದಿ)ಗಳ

ಪರಿಚಯ, ಜ್ಞಾನಗಳು ವ್ಯಾಪಾರಿಗೆ ಬದಲಾಗುವ ಗ್ರಾಹಕನ ಅಭಿರುಚಿ, ಮನೋಭಾವಗಳನ್ನು ಗಮನಿಸಬೇಕಾಗುತ್ತದೆ.

ಲೇಖನ ಮತ್ತು ವಿಮರ್ಶೆ : ಹಿಂದೆ ಪ್ರಾಸಂಗಿಕವಾಗಿ ಕಾವ್ಯ ನಾಟಕಗಳಲ್ಲಿ ಚಿತ್ರಕಲೆಯನ್ನು ಕುರಿತು ಹೇಳಿರುವುದುಂಟು. ಬಣ್ಣ, ನಿರ್ವಹಣೆ, ವಸ್ತು ಇತ್ಯಾದಿ ಕುರಿತು ಕೆಲವು ಪಾರಿಭಾಷಿಕ ಶಬ್ದಗಳು ದೊರೆಯುತ್ತದೆ. ಉಳಿದ ಲಲಿತಕಲೆಯಂತೆ ಇಲ್ಲಿಯೂ ಲೇಖನ, ಪುಸ್ತಕಗಳು ಕಡಿಮೆ. ಕಲಾವಿದನ ಅಥವಾ ಕಲೆಯ ಇತಿಹಾಸ, ಚರಿತ್ರೆಗಳಿಗಷ್ಟೇ ಅವು ಸೀಮಿತವಾಗಿದೆ. ನವ್ಯ ಬಂದಾಗ ಅದನ್ನು ಸ್ವಾಗತಿಸುವ, ಪರಿಚಯಿಸುವ, ಆಸ್ವಾದಿಸುವ ಲೇಖನಗಳು ಬರಲಿಲ್ಲ. ಕೆಲವು ಪತ್ರಿಕೆಗಳು ಹಾಗೂ ವಿಶೇಷ ಸಂಚಿಕೆಗಳು ಚಿತ್ರಪ್ರದರ್ಶನ ಕುರಿತು, ಕಲಾವಿದನ ಕುರಿತು 'ವಿಮರ್ಶೆ'ಗಳನ್ನು ಪ್ರಕಟಿಸಿದರೂ ಅವುಗಳಲ್ಲಿ ಆಳವಾದ ಅಧ್ಯಯನ ಕಂಡುಬರಲಿಲ್ಲ. ಅವುಗಳನ್ನು ಕುರಿತ ಮೀಮಾಂಸೆಯಾಗಲೀ, ಚರ್ಚೆಯಾಗಲೀ ಬರಲಿಲ್ಲ. ಕಾರಣ ಕಲಾವಿದ ಕಂಡಷ್ಟೂ, ಓದಿದಷ್ಟು, ದೇಶ-ವಿದೇಶ ಸುತ್ತಿದಷ್ಟು, ಪ್ರಯೋಗಿಸಿದಷ್ಟು 'ವಿಮರ್ಶಕ' ಎಂಬಾತ ಮಾಡಿರಲಿಲ್ಲ. ಅಧಿಕೃತವಾಗಿ ಕಲೆಯ ಬಗ್ಗೆ, ಕಲಾವಿದನ ಬಗ್ಗೆ ಮಾತನಾಡಲು ಲೇಖಕನಿಗೆ ಸಾಮರ್ಥ್ಯ ಬೇಕಾಗುತ್ತದೆ.

ಶಾಲೆ : ಹಿಂದೆ ರಾಜ ಮನೆತನದವರಿಗೆ ನೀಡುವ ಹತ್ತು ಹಲವು ಶಿಕ್ಷಣದಲ್ಲಿ ಚಿತ್ರಕಲೆಯೂ ಒಂದಾಗಿತ್ತು. ವಿದೇಶೀ ಪ್ರೇರಿತ ನೈಜವಾದದ ಕಾಲದಲ್ಲಿ ಚಿತ್ರಕಲೆಯನ್ನು 'ಕಲಿಸ'ಬಹುದೆಂಬ, ಯಾರೇ ಆಗಲಿ 'ಕಲಿಯ ಬಹುದೆಂಬ ಕಲ್ಪನೆಯಂತೆ ಹಲವಾರು 'ಶಾಲೆ'ಗಳು ಹುಟ್ಟಿಕೊಂಡವು. ಬೊಂಬಾಯಿ, ಬರೋಡ, ಮೈಸೂರು ಇತ್ಯಾದಿಗಳಲ್ಲಿ ದೇಶೀಯ ಅರಸರು ಅಥವಾ ಶ್ರೀಮಂತರು 'ಶಾಲೆ'ಗಳನ್ನು ಆರಂಭಿಸಿ 'ಪದವಿ'ಗಳನ್ನು ಕೊಡತೊಡಗಿದರು. 'ಪಠ್ಯ ವಿಷಯ'ವೂ ಸಿದ್ಧವಾಯಿತು. ಇದು ನವ್ಯದ ಆರಂಭದವರೆಗೂ ಮುಂದುವರಿಯಿತು. 'ನವ್ಯ'ದ ಧೋರಣೆಯಂತೆ 'ಕಲಿಯುವ' ಅಥವಾ 'ಕಲಿಸು'ವುದರಲ್ಲಿ ಅರ್ಥವಿಲ್ಲ, ಸಾಧ್ಯವಿಲ್ಲ. ಇಲ್ಲಿ 'ಮೌಲ್ಯ ಮಾಪನ' ಸಾಧ್ಯವಿಲ್ಲ. ಈಗ 'ಕಲಿಸು'ವುದೆಂದರೆ ಕಲಾ ಚರಿತ್ರೆ ತಿಳಿಸುವುದು. ಪ್ರಸಿದ್ಧ ಕಲಾವಿದರ ಮುದ್ರಿತ ಅಥವ ಪಾರದರ್ಶಿಕೆ (ಸ್ಲೈಡ್) ತೋರಿಸುವುದು ಹಾಗು ಬಣ್ಣ, ಫಲಕಗಳ ಬಳಕೆ, ತಾಳಿಕೆ, ವೈವಿಧ್ಯತೆಗಳ ಬಗ್ಗೆ ವೈಜ್ಞಾನಿಕವಾಗಿ ತಿಳುವಳಿಕೆ ನೀಡುವುದು. 'ವಿದ್ಯಾರ್ಥಿ' ರಚಿಸಿದ ಕೃತಿಯಲ್ಲಿಯ ತಂತ್ರಗಾರಿಕೆ ಬಣ್ಣಗಾರಿಕೆ, 'ವಿಷಯ' (ಇದ್ದರೆ) ಇತ್ಯಾದಿಗಳನ್ನು ನೋಡುವ 'ಉಪಾಧ್ಯಾಯ' ಈಗಾಗಲೇ ಈ ದಿಸೆಯಲ್ಲಿ ಫಲಕದಲ್ಲಿ ನಿರ್ವಹಿಸಿಸುವಂತೆ ರಚಿಸಿರುವ ಬೇರೆ ಕಲಾಕೃತಿಗಳನ್ನು ರಚಿಸಬಹುದು. ಒಟ್ಟು ಕಲಾ ಪ್ರವಾಹದಲ್ಲಿ ವಿದ್ಯಾರ್ಥಿಗೆ ತನ್ನ ಸಾಮರ್ಥ್ಯ ಅರಿತು ತನ್ನ ಸ್ಥಾನವನ್ನು ಗುರುತಿಸಿಕೊಳ್ಳಬೇಕಾದುದು ಆತನದೇ ಕರ್ತವ್ಯವಾಗುತ್ತದೆ. ಹಳೆಯ ಗುರುಕುಲ ಪದ್ಧತಿಯಂತೆ ಬೇರೆ ಬೇರೆ ಶಾಲೆಗಳಿಗೆ ವಿದ್ಯಾರ್ಥಿ ಹೋಗುವುದರಿಂದ

ಹೆಚ್ಚು ಹೆಚ್ಚು ಅನುಭವಗಳನ್ನು ಪಡೆಯುತ್ತಾನಲ್ಲದೆ ಈವರೆಗೂ ಆ ದಿಸೆಯಲ್ಲಿ ಆಗಿರುವ ಕೆಲಸದ ಬಗ್ಗೆ, ಬಂದ ಕಲಾ ಕೃತಿಗಳ ಬಗ್ಗೆ, ತಂತ್ರಗಳ ಬಗ್ಗೆ ತಿಳಿಯುತ್ತಾ ಹೋಗುವಂತಾಗುತ್ತದೆ.

ತಂತ್ರ : ಇದು ಮಾಧ್ಯಮಕ್ಕೆ ಸಂಬಂಧಿಸಿದ್ದು, ಗೋಡೆ, ಮರ, ಕಾಗದ, ಬಟ್ಟೆ ಇತ್ಯಾದಿ ಫಲಕಗಳು ; ಜಲ, ತೈಲ, ಅಕ್ರಲಿಕ್ ಇತ್ಯಾದಿ ಬಣ್ಣ ಪ್ರಕಾರಗಳು ; ರೇಖಾಚಿತ್ರ, ವ್ಯಂಗ್ಯ ಚಿತ್ರ, ಪೂರಕ ಚಿತ್ರ, ವ್ಯಾಪಾರಿ (ಕಮರ್ಶಿಯಲ್) ಚಿತ್ರ, ಬ್ಯಾನರ್, ಜಾಹಿರಾತು ಚಿತ್ರ ಇತ್ಯಾದಿಗಳಲ್ಲಿಯ ಪರಸ್ಪರ ಭಿನ್ನತೆಗಳು, ಅವುಗಳು ಒಳಗೇ ಇರುವ ಪ್ರಬೇಧಗಳು ; ಭಾವಚಿತ್ರ, ರೂಪಚಿತ್ರ, ಭೂದೃಶ್ಯ, ಸ್ಥಬ್ಧ ಚಿತ್ರ (ಸ್ಟಿಲ್ ಲೈಫ್) ಕೊಲಾಜ್, ಗಾಜಿನ ಫಲಕ ಇತ್ಯಾದಿಗಳು ; ಪೌರಾಣಿಕ, ಸಾಮಾಜಿಕ, ಜನಪದ ಇತ್ಯಾದಿ. 'ವಸ್ತು'ನಿರೂಪಣೆಗಳು ; ಗ್ರಾಫಿಕ್ ಮುದ್ರಣದ ಚಿತ್ರಗಳಲ್ಲಿ, ಲಿಥೊ (ಕಲ್ಲಚ್ಚು), ಎನ್‌ಗ್ರೇವ್ (ಕೊರೆಯಚ್ಚು), ಸಿಲ್ಕ್ ಸ್ಕ್ರೀನ್ (ರೇಶ್ಮೆ ಜಾಲರಿ)ಗಳೂ ಹಾಗೂ ಉಪಬೇಧಗಳಾದ ಅಕ್ವಾಟೆಂಟ್, ಮೆಸೊಟೆಂಟ್ ಇತ್ಯಾದಿ ಹಲವಾರು ಪ್ರಕಾರಗಳು ; ಶಿಲ್ಪ ಮಾಧ್ಯಮದಲ್ಲಿ ಸುಡಾವೆ ಮಣ್ಣಿನಿಂದ ಹಿಡಿದು ಮರ, ಕಲ್ಲು, ವಿವಿಧ ಲೋಹ, ಈಚೆಗೆ ಫೈಬರ್ ಗ್ಲಾಸ್, ಥರ್ಮೋಕೋಲ್ ಇತ್ಯಾದಿಗಳು ಇಂಪ್ರಷನಿಸಂ, ಕ್ಯುಬಿಸಂ ಇತ್ಯಾದಿ ಪಂಥಗಳು– ಈ ಎಲ್ಲವೂ ಬಳಸುವಲ್ಲಿ, ಕೃತಿ ರಚನೆಯಲ್ಲಿ 'ತಂತ್ರ'ಗಳು ಪ್ರಧಾನ ಪಾತ್ರ ವಹಿಸುತ್ತವೆ. ಇವುಗಳ ಗುಣಧರ್ಮ ತಿಳಿಯುವಲ್ಲಿ, ಬಳಸುವಲ್ಲಿ ಕಲಾವಿದ ಅನೇಕ 'ಪ್ರಯೋಗ'ಗಳನ್ನು ಮಾಡುತ್ತಾನೆ. ಮಾಧ್ಯಮಗಳನ್ನು 'ಕೈ ವಶ' ಮಾಡಿಕೊಳ್ಳುವಲ್ಲಿ ಕಲಾವಿದನ ಬುದ್ಧಿ ಶಕ್ತಿ, ಸಾಮರ್ಥ್ಯ, ದೈಹಿಕ ಬಲಗಳು ಮುಖ್ಯವಾಗುತ್ತದೆಯಲ್ಲದೆ ರಾಸಾಯನಿಕ ಶಾಸ್ತ್ರ ಹಾಗೂ ಭೌತಶಾಸ್ತ್ರಗಳು ನೆರವಾಗುತ್ತದೆ.

ಕಲಾವಿದ : ಈತ ಈಗ ಇತಿಹಾಸ ಕಾಲದವನಂತೆ ಪರಂಪರೆಯ ಕೊಂಡಿಯಲ್ಲ ನೈಜ ಕಲಾವಿದರಂತೆ 'ಕಲಿತ'–'ವಿದ್ಯಾರ್ಥಿ' ಅಲ್ಲ. ಪೇಟೆಯಲ್ಲಿ ಫಲಕ ಹಾಗೂ ಬಣ್ಣಗಳು ದೊರೆಯುತ್ತವೆ. ಅವುಗಳನ್ನು ತಂದು ತನ್ನ ಮನಸ್ಸಿನಲ್ಲಿ 'ಇರುವುದನ್ನು' ಚಿತ್ರಿಸಿದರೆ 'ಕೃತಿ'ಯಾಗುತ್ತದೆ. ಹಾಗೆ ಮನಸ್ಸಿನಲ್ಲಿರುವುದು ಮೂಡಿಸುವುದಷ್ಟೇ ಆತನ ಕೆಲಸ. ಇದು ಸ್ವಂತ ಪರಿಶ್ರಮದಿಂದ ತಿಳಿಯಬೇಕೇ ವಿನಹ ಯಾರೂ ಕಲಿಸಲಾರರು. 'ಶಾಲೆ'ಯಲ್ಲಿ ಐದಾರು ವರ್ಷ ಆತ ಮಾಡಬೇಕಾದದ್ದು ಇದೇ. ಒಮ್ಮೆ ಕಲಾವಿದನಾದ ಮೇಲೆ ಆತ ಕೆಲವು 'ಧೋರಣೆ'ಗಳಿಗೆ ಒಳಗಾಗುತ್ತಾನೆ. ಪ್ರದರ್ಶನಕ್ಕೆ ಕಳಿಸುವಲ್ಲಿ ಆಯ್ಕೆ, ಏಕವ್ಯಕ್ತಿ ಪ್ರದರ್ಶನದಲ್ಲಿ ಇರಿಸುವ ಕೃತಿಗಳಲ್ಲಿ ತಾದಾತ್ಮ್ಯ, ಪ್ರದರ್ಶಿಸುವಲ್ಲಿ ರೀತಿ, ನೀತಿಗಳು ಒಮ್ಮೆ ಪ್ರದರ್ಶಿತವಾದದ್ದು, ಸ್ಪರ್ಧೆಯಲ್ಲಿ ಭಾಗವಹಿ

ಸಿದ್ದು ಇನ್ನೊಮ್ಮೆ ಪ್ರದರ್ಶಿಸಬಾರದೆಂಬ, ಸ್ಪರ್ಧೆಗೆ ಕಳುಹಿಸಬಾರದೆಂಬ ಸ್ವಯಂ ನಿಯಮ, ತನ್ನ ಕೃತಿಗಳ ಬಗ್ಗೆ ತಾನೇ ಏನನ್ನೂ ಹೇಳಬಾರದೆಂಬ ಆದರೆ ತನ್ನ ಅನ್ನಿಸುವಿಕೆಗೆ ಸಮೀಪವಾದ ವಿಮರ್ಶೆ, ಪ್ರಶಂಸೆ ಬಂದರೆ ಸ್ವೀಕರಿಸುವ ಮನೋಭಾವ, ಕಾಲಕಾಲಕ್ಕೆ ಚಿತ್ರಕಲೆಯಲ್ಲಿ ಆಗುವ ಬದಲಾವಣೆಯನ್ನು (ಟ್ರೆಂಡ್) ಅರಿತು ಸ್ಪಂದಿಸುವಿಕೆ, ಎಲ್ಲಕ್ಕಿಂತ ತನ್ನ ಸಮಾಜದಿಂದ ಪಡೆದು ಕಲಾಕೃತಿಯ ಮೂಲಕ ಜನಕ್ಕೆ ನೀಡುವಾಗ ಇರಬೇಕಾಗಿ ಜವಾಬ್ದಾರಿ, ಎಚ್ಚರಿಕೆ–ಇವೆಲ್ಲ ಕಲಾವಿದನಿಗೆ ಮುಖ್ಯ ವಾಗುತ್ತದೆ.

ಕಲಾವಿದರ ಶಿಬಿರ : ಮೊದಲಿಗೆ ಕಲಾವಿದ ಸಾರ್ವಜನಿಕವಾಗಿ ಚಿತ್ರರಚಿಸು ವುದು ತೀರ ಕಷ್ಟಸಾಧ್ಯವಿತ್ತು. ತನ್ನ ನಿರ್ವಹಣಾ ಕೌಶಲ್ಯ, ಬಣ್ಣಗಳನ್ನು ಬೆರೆಸುವುದು ತನ್ನದೇ ಸ್ವತ್ತೆಂಬಂತೆ, ಶಿಷ್ಯರಿಗೂ ಕಲಿಸದೆ ಇದ್ದುದೂ ಉಂಟು. ಅಂತಹ ಪರಿಸ್ಥಿತಿ ಯಲ್ಲಿ 'ಶಿಬಿರ'ದಲ್ಲಿ ಹತ್ತಾರು ಕಲಾವಿದರು ಕೆಲವು ದಿನಗಳು ಒಂದೆಡೆ ಕಲೆತು, ಸಾರ್ವಜನಿಕರೆದುರು ಕಲಾಕೃತಿ ರಚಿಸುವುದು, ಜನರ ಪ್ರಶ್ನೆಗೆ ಉತ್ತರಿಸುವುದು. ಸಮಕಾಲೀನ ಕಲೆಯ ಬೆಳವಣಿಗೆಯ ದೃಷ್ಟಿಯಿಂದ ಮಹತ್ತರವಾದುದು.

ಅಕಾಡೆಮಿ : ಯೂರೋಪು ದೇಶಗಳಲ್ಲಿ ಮ್ಯೂಸಿಯಂಗೆ ಹೊಂದಿಕೊಂಡಂತೆ, ಅಲ್ಲಿಯ ಪ್ರಸಿದ್ಧ ಚಿತ್ರಗಳನ್ನು ನಕಲು ಮಾಡುವ ಕಾರ್ಯಾಗಾರದಿಂದ ಆರಂಭವಾದ 'ಅಕಾಡೆಮಿ'ಯ ಕಲ್ಪನೆ ಸಮಕಾಲೀನ ಕಲೆಯ ಕಲಾವಿದರ ಪೋಷಣೆಗೆ, ಬೆಳವಣಿಗೆಗೆ, ಕೊಂಡು ಕೊಳುಗೆಗೆ ಪ್ರದರ್ಶನ, ಪ್ರಕಟಣೆ, ಆರ್ಥಿಕ ನೆರವು ಇತ್ಯಾದಿ ಅನೇಕ ಬಗೆಯ ಕಾರ್ಯವನ್ನು ಈಗ ನಿರ್ವಹಿಸುತ್ತಿದೆ.

ಕಲಾಚರಿತ್ರೆಯ ದೃಷ್ಟಿಯಿಂದ ಕಾಲಮಾನ, ಶೈಲಿ, ಪ್ರದೇಶ, ಇತ್ಯಾದಿ ಹಲವಾರು ವಿಭಾಗಗಳನ್ನಾಗಿ ಹೆಸರಿಸುವುದು ಅವಶ್ಯವಾಗುತ್ತದೆ. ಹಾಗೆ ಮಾಡಿದಾಗ ಆಧುನಿಕ, ಸಮಕಾಲೀನ, ನವ್ಯ, ಅಮೂರ್ತ ಇತ್ಯಾದಿ ಹೆಸರುಗಳನ್ನು ನೀಡಿದ್ದು ಕೆಲವರಲ್ಲಿ ಗೊಂದಲ ಉಂಟುಮಾಡಿರಬಹುದು. ಒಂದು ಪರಿವರ್ತನೆಯ ಕಾಲದಲ್ಲಿ ಇದು ಆಗುವುದು ಸಹಜವೇ ಆಗುತ್ತದೆ. ಇನ್ನೂ ನಮ್ಮಲ್ಲಿ ಹಳೆಯ ಮೈಸೂರು ಶೈಲಿ ಯಲ್ಲಿ ರಚಿಸುವ ಕಲಾವಿದರು ಇರುವುದರಿಂದ ಅವರಿಗೆ ರವಿವರ್ಮನ ನೈಜ ಶೈಲಿಯೇ 'ಆಧುನಿಕ'ವಾಯಿತು. ನೈಜ ಶೈಲಿಯ ಹಾಗೂ ಕೆಲವು ಇಸಂಗಳ ಪ್ರಭಾವಕ್ಕೆ ಒಳಗಾದ ಸಮಾನ ಮನೋಭಾವದ ದೊಡ್ಡ ಗುಂಪು ಇರುವುದರಿಂದ ಅವರ ಕೃತಿಗಳು 'ಸಮಕಾಲೀನ'ವೆನ್ನಿಸುತ್ತದೆ. ಚಾಳುಕ್ಯರದನ್ನು ಹೊಯ್ಸಳರೇ ಅನುಸರಿಸದೇ ಹೋದರೂ ಇಂದಿಗೂ ಆ ಶೈಲಿಯಲ್ಲಿ ಕಲಾಕೃತಿ ನಿರ್ಮಿಸುವ 'ಸಂಪ್ರದಾಯ' ವಾದಿಗಳೂ ಇದ್ದಾರೆ. ಆ ಕಲೆಗೆ ಬೇಡಿಕೆಯೂ ಇದೆ. 'ನವ್ಯ' ಮತ್ತು 'ಅಮೂರ್ತ'ಗಳು ತೀರಾ ಚಿತ್ರಿತ 'ವಸ್ತು'ವಿಗೆ ಸಂಬಂಧಿಸಿದ್ದು. ಆದರೆ ಅದರೊಂದಿಗೆ ಶೈಲಿ, ತಂತ್ರಗಳೂ ಸೇರಿಕೊಂಡವು. ಜನ ಹೊಸದನ್ನು ಮೆಚ್ಚುವುದಿಲ್ಲ ದಿಟ. ಆದರೆ ಗುಹಾಂತರದಿಂದ

ಫಲಕಗಳ ಮೇಲೆ ಚಿತ್ರ ಮೂಡಿ ಬಂದಾಗ ; ರಾಮ, ಕೃಷ್ಣರಿಗೂ ಚಿಕಣಿ ಚಿತ್ರಗಳಲ್ಲಿ ಮುಸ್ಲಿಂ ಉಡುಗೆ-ತೊಡುಗೆ ಹಾಕಿದಾಗ, ಮೈಸೂರು ಸಂಪ್ರದಾಯ ವಿಜೃಂಭಿಸುತ್ತಿದ್ದಾಗಲೇ ತೈಲವರ್ಣದ ನೈಜ ಚಿತ್ರಗಳು ಬಂದಾಗ ಜನ ಹಾಗೂ ಕಲಾವಿದರು ಸ್ವಾಗತಿಸಿದಂತೆ, 'ಆಧುನಿಕ ಕಾಲದಲ್ಲಿ ಸ್ವಾಗತಿಸಲಿಲ್ಲ. ಹಿಂದೆ ಹೇಳಿದಂತೆ ಈವರೆಗೂ ದೇವಾನು . ದೇವತೆಗಳ ಚಿತ್ರಗಳೇ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಶೈಲಿಯಲ್ಲಿ ಮಾಧ್ಯಮದಲ್ಲಿ ಬಂದವು. ಈಗ 'ವಸ್ತು' ಪೂರ್ತಿ ಬದಲಾಯಿತು. ನಿರೂಪಣೆ, ತಂತ್ರ, ಸಂಕೇತಗಳು, ಉದ್ದೇಶ, ಕಲಾವಿದನ ಮನೋಭಾವ, ರಸ ಇತ್ಯಾದಿಗಳನ್ನು ನಾಟಕೀಯವಾಗಿ ಹೇಳಿದಾಗ ಉಂಟಾದ ವಿಕೃತ ರೂಪಗಳು, ಆದಿಮ ಕಲೆಯಂತೆ 'ಮುಗ್ಧ'ವಾಗಿ ಕಂಡುಬರುವ ರಚನೆ- ಇತ್ಯಾದಿ ಹಲವಾರು ಪ್ರಮುಖ ಬದಲಾವಣೆಗಳಾದವು. ಹೊರಗಿನ ಪ್ರಭಾವವೂ ಅತಿಯಾಯಿತು. ಲೇಖಕ ಅಥವಾ ವಿಮರ್ಶಕ ಈ ಎಲ್ಲದರ ಹಿನ್ನೆಲೆಯಲ್ಲಿ 'ನವ್ಯ' ಬರುತ್ತಿದ್ದಂತೆ ಒಂದು 'ತಳಹದಿ'ಯನ್ನು ಹಾಕಿದ್ದಾರೆ ; ಪತ್ರಿಕೆಗಳು ಸತತವಾಗಿ ಆಧುನಿಕ ಚಿತ್ರಗಳಿಗೆ ಸ್ಪಂದಿಸಿ ನಿಯಮಿತವಾಗಿ ಪ್ರಕಟಿಸಿ ಪ್ರೋತ್ಸಾಹಿಸಿದ್ದರೆ ಇಂದು ಕರ್ನಾಟಕದಲ್ಲಿಯ 'ನವ್ಯ' ಚಿತ್ರಗಳಿಗೆ ಜನಪ್ರಿಯತೆ, ಸಹೃದಯತೆ, ಸ್ವಾಗತಗಳು ಜನಸಾಮಾನ್ಯರಿಂದ ಇನ್ನಷ್ಟು ದೊರೆಯಬಹುದಿತ್ತು. ತಿಳಿಯಬೇಕೆಂಬ ಕುತೂಹಲ ಉಳ್ಳವರಿಗೂ ತಿಳಿಸಬಲ್ಲ ಶಾಲೆಗಳಾಗಲೀ, ಸಂಘ ಸಂಸ್ಥೆಗಳಾಗಲಿ, ಬರಹ-ಪುಸ್ತಕಗಳಾಗಲಿ ಇಲ್ಲದಿರುವುದು ವಿಷಾದನೀಯ. ಅಂತೆಯೇ 'ಆಧುನಿಕ-ನವ್ಯ' ಕಲೆ 'ಅರ್ಥ'ವಾಗುವುದಿಲ್ಲವೆಂದು ಹೇಳುವವರಿಗೆ ಸಂಪ್ರದಾಯ ಕಲೆಯೂ 'ಅರ್ಥ'ವಾಗುವುದಿಲ್ಲ !



ಕಲಾವಿದ ಯಂತ್ರವಲ್ಲ ; ಸಂವೇದನಾಶೀಲ ವ್ಯಕ್ತಿ. ಇವತ್ತೇನೋ ನಾವು Art ಇಲ್ಲವೇ 'ಕಲೆ' ಎಂಬ ಪದವನ್ನು ವಿವೇಚನೆಯಿಲ್ಲದೆ ಬಳಸುತ್ತಿದ್ದೇವೆ ; ಆ ಲೆಖ್ಖದಲ್ಲಿ ನೇಯುವ ಕಲೆ, ಅಡುಗೆಯ ಕಲೆ, ಕದಿಯುವ ಕಲೆ, ಆಳುವ ಕಲೆ ಎಂಬ ಪದಪ್ರಯೋಗಗಳು ಹುಟ್ಟಿಕೊಂಡಿದೆ, ಸೂಕ್ಷ್ಮ ಕೆಲಸವೆಲ್ಲಾ ಕಲೆಯೇ ಆಯಿತು. ಆದುದರಿಂದ ಕಲೆಯ ಜತೆಗೆ Creative ಅಥವಾ ಸೃಷ್ಟಿಕಾರಿ ಎಂಬ ವಿಶೇಷಣ ಸೇರಿಸುವ ಅನಿವಾರ್ಯ ಬಂದಿದೆ. ಚಿತ್ರಕಲೆಗೆ ಅನ್ವಯಿಸುವಾಗ ಅದು ಕೆಮರಾ ಮಾಡುವಂಥ ಕೆಲಸವಲ್ಲ ಎಂದು ಮೊದಲಿಗೇ ಹೇಳಬೇಕಾಗುತ್ತದೆ.

–ಶಿವರಾಮ ಕಾರಂತ

# ಒಂದು ಕತ್ತಲ ಕವನ

**ರವಿಕುಮಾರ ಕಾಶಿ**
ಅಂತಿಮ ಎಂ.ಎಫ್. ವಿದ್ಯಾರ್ಥಿ, ಎಂ.ಎಸ್. ಯುನಿವರ್ಸಿಟಿ, ಬರೋಡ

ನಿರ್ಜನ ನದೀ ತೀರದ ಉದ್ದೋ ಉದ್ದ ಹುಲ್ಲಿನ ನಡುವೆ ನಾನವಳ
ಕೇಳಿದೆ– "ಕನ್ನೆ, ನಿನ್ನ ಹಣತೆಯನ್ನು ಹೊತ್ತು ಎಲ್ಲಿಗೆ ಹೊರಟಿದ್ದೀಯೆ ?
ನನ್ನ ಮನೆ ಪೂರಾ ಅಂಧಕಾರ, ಒಂಟಿಮಯ ; ಬೆಳಕು ನೀಡಲಾರೆಯ ?
ಆಕೆ ಕಡುಪಾದ ಕಣ್ಣೆತ್ತಿ ಸಂಜೆ ಬೆಳಕಲ್ಲಿ ನನ್ನ ನೋಡಿ ಹೇಳಿದಳು
'ಪಶ್ಚಿಮದಿ ಸೂರ್ಯ ಕರಗುವಾಗ ನನ್ನ ಹಣತೆಯನ್ನು ನದಿಯಲ್ಲಿ ತೇಲಿ ಬಿಡಲು
ಬಂದಿದ್ದೇನೆ' ಉದ್ದೋದ್ದ ಹುಲ್ಲಲ್ಲಿ ನಾನು ಒಂಟಿ ನಿಂತು ಅವಳ ಕಿರು ಹಣತೆಯ
ಬೆಳಕು ವ್ಯರ್ಥ ತೇಲುತ್ತಾ ಹೋಗುವುದ ಕಂಡೆ.

ಮುಸುಕುವ ಕತ್ತಲ ಮೌನದಲ್ಲಿ ನಾನವಳ ಕೇಳಿದೆ–'ಕನ್ನೆ,
ನಿನ್ನ ದೀಪವೆಲ್ಲ ಬೆಳಗಿದೆ– ಮತ್ತೂ ಈ ಹಣತೆ ಹೊತ್ತು ಎತ್ತ ಹೊರಟಿದ್ದೀಯಾ ?
ನನ್ನ ಮನೆ ಪೂರಾ ಅಂಧಕಾರ, ಒಂಟಿಮಯ, ಬೆಳಕು ನೀಡಲಾರೆಯಾ ?
ಆಕೆ ಕಡುಪಾದ ಕಣ್ಣೆತ್ತಿ ನನ್ನೆಡೆಗೆ ಸಂಶಯದಲ್ಲಿ ನೋಡಿ ಹೇಳಿದಳು ಕೊನೆಗೆ
'ನಾನು ನನ್ನ ಹಣತೆಯನ್ನು ಆಕಾಶಕ್ಕೆ ಅರ್ಪಿಸಲು ಬಂದಿದ್ದೇನೆ.' ನಾನು ನಿಂತು
ಅವಳ ಹಣತೆ ವ್ಯರ್ಥ ಶೂನ್ಯದಲ್ಲಿ ಬೆಳಗುವುದ ಕಂಡೆ.

ಚಂದ್ರಮನಿಲ್ಲದ ಕಗ್ಗತ್ತಲ ಮಧ್ಯರಾತ್ರಿಯಲ್ಲಿ ನಾನವಳ ಕೇಳಿದೆ–'ಕನ್ನೆ,
ಹಣತೆಯನ್ನು ಹೃದಯದ ಬಳಿಯೇ ಹಿಡಿದಿರುವ ನಿನ್ನ ಥರವೇನು ?
ನನ್ನದೆ ಪೂರಾ ಅಂಧಕಾರ, ಒಂಟಿಮಯ, ನೀನು ಬೆಳಕು ನೀಡಲಾರೆಯ ?
ಅವಳೊಂದು ಚಣ ತಡೆದು, ಯೋಚಿಸಿ, ಕತ್ತಲಲಿ ನನ್ನ ಮೊಗ ದಿಟ್ಟಿಸುತ್ತಾ
ಉಸುರಿದಳು, 'ಹಣತೆಗಳ ಉತ್ಸವ ಸೇರಲು ನನ್ನ ಹಣತೆ ತಂದಿದ್ದೇನೆ !'
ನಾನು ಉದ್ದ ನಿಂತು ಅವಳ ಕಿರು ಹಣತೆ ವ್ಯರ್ಥ ಬೆಳಕಲ್ಲಿ ಬೆಳಕಾಗುವುದ ಕಂಡೆ.

ಪ್ರೇರಣೆ : ಗೀತಾಂಜಲಿಯಿಂದ

# ಸೃಷ್ಟಿ ಪ್ರಕ್ರಿಯೆ – ಸಾಧ್ಯತೆಗಳು

**ರಮೇಶ್ ಚಂದ್ರ**
ಕೆನ್ ಕಲಾ ಶಾಲೆ, ಶೇಷಾದ್ರಿಪುರಂ, ಬೆಂಗಳೂರು–20

ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಕಲೆಯ ಅಸ್ತಿತ್ವವನ್ನು ಗಮನಿಸಿದಾಗ, ಹರಪ್ಪ ನಾಗರೀಕತೆಯ ಪೂರ್ವದಲ್ಲಿ ಸಾಮಾಜಿಕ ನಂಬಿಕೆಗಳಿಗೆ ಬದ್ಧವಾಗಿ ತೊಡಗಿಕೊಂಡ ಕಲೆ ಕ್ರಿ. ಪೂ. ಆರನೆಯ ಶತಮಾನದ ನಂತರ ಧಾರ್ಮಿಕ ಪ್ರವೃತ್ತಿಯ ಜಾಹೀರಾತಾಗಿ ಕ್ರಿಯಾಶೀಲಗೊಂಡಿತ್ತು. ಇಂದು ಧಾರ್ಮಿಕ, ರಾಜಕೀಯ ಹಾಗೂ ಸಾಮಾಜಿಕ ಬದ್ಧತೆಯನ್ನುಳಿದು, ವ್ಯಕ್ತಿಯ ಆಂತರಿಕ ಅನುಭವದ ಅಭಿವ್ಯಕ್ತಿ ಮಾಧ್ಯಮವಾಗಿಯಷ್ಟೇ ಉಳಿದುಕೊಂಡಿದೆ.

ಸಮೂಹಕ್ಕಾಗಿ (Society–Relegious & Polytical) ಚಿತ್ರಿಸುವ ಸಾಂಪ್ರದಾಯಿಕ ನಿಯಮ ಮತ್ತು ಚಿಂತನೆಗಳ ಪಾತಳಿಯನ್ನು ಬಿಟ್ಟು ವೈಯಕ್ತಿಕ ಅನುಭವ ಹಾಗು ಪ್ರಜ್ಞೆಯ ಅಡಿಯಲ್ಲಿ ನಿರ್ಮಾಣಗೊಳ್ಳುವ ಕೃತಿಯೊಂದರ ಹಿಂದಿನ ಒತ್ತಡ ಮತ್ತು ಸೃಷ್ಟಿಕ್ರಿಯೆಯ ನೆಲೆಯನ್ನ ಹುಡುಕುವುದಷ್ಟೇ ಈ ಪ್ರಬಂಧದ ಕೆಲಸ. ಇದಕ್ಕಾಗಿ ಕೆಲವು ದಿವಸಗಳ ಹಿಂದೆ ಯುವ ಕಲಾವಿದರ ಸಂದರ್ಶನದಿಂದ ದೊರೆತ ನನ್ನ ಅನುಭವದ ಮೊತ್ತಕ್ಕೆ, ಹಲವು ಪರಿಶೀಲನೆಗಳ ನಂತರವೂ ಗೊಂದಲವಾಗಿಯೆ ಉಳಿದುಹೋದ ವಿಷಯಗಳ ಒತ್ತುಕೊಟ್ಟು ನನ್ನ ಸಾಮರ್ಥ್ಯದ ಮಿತಿಯಲ್ಲಿ ವಿವೇಚಿಸಲು ಪ್ರಯತ್ನಿಸುತ್ತೇನೆ.

ಯಾವುದೇ ಸಾಮೂಹಿಕ ಪ್ರಕ್ರಿಯೆಯಲ್ಲಿ ತೊಡಗಿಸುವಂಥ ಜೀವನ ಕ್ರಮ ಹಾಗೂ ಕನಸುಗಾರಿಕೆಯನ್ನು ಕಳೆದುಕೊಳ್ಳುತ್ತಿದ್ದೇವೆನ್ನುವ ಗುಮಾನಿಯಲ್ಲಿ, ಯುವ ಕಲಾವಿದರ ಚಿತ್ರರಚನೆಗೆ ಪ್ರೇರಕವಾದ ಸಂಗತಿಗಳ ಅಧ್ಯಯನ ಮಾಡುವಾಗಲೂ, Academic Studyಯನ್ನು ಮೀರಬಲ್ಲಂಥ ಸಾಧ್ಯತೆಗಳಿಗಾಗಿ, ಆ ಸಂದರ್ಶನಗಳಲ್ಲಿ ಹುಡುಕಾಟ ನಡೆಸುವಾಗ ಕೂಡಾ ನನ್ನ ಗಮನ ಕೇವಲ ಚಿತ್ರರಚನೆಯ ಸಂದರ್ಭದ ಬೌದ್ಧಿಕ ಅನುಭವವನ್ನೇ ಗುರಿಯಾಗಿಟ್ಟು ಎನ್ನುವುದನ್ನ ಇಲ್ಲಿ ಸ್ಪಷ್ಟಪಡಿಸಬೇಕಾಗುತ್ತದೆ.

ಒಂದು ಪೂರ್ಣ ಖಾಲೀ ಕ್ಯಾನವಾಸನ್ನು ಎದುರಿಗಿಟ್ಟುಕೊಂಡು ಕಲಾವಿದ ಕುಳಿತನೆಂದರೆ, ಮಾನಸಿಕ ಉದ್ವೇಗದ ಪರಾಕಾಷ್ಠತೆಗೆ ಒಳಗಾಗುತ್ತಾನೆ. ಅವನನ್ನು ಯಾವಾಗಲೂ ಕಾಡುವುದೆಂದರೆ ಖಾಲೀ ಕ್ಯಾನವಾಸ್. ಇಲ್ಲಿಗೆ ಕಲಾವಿದನ ಪಯಣ ಪ್ರಾರಂಭವಾಗುತ್ತದೆ. ಕವಿ ರವೀಂದ್ರರು ಹೇಳುವ ಹಾಗೆ, "Rhythm in

Thought and Rhythm in mind" ಇದರೊಂದಿಗಿನ ಪ್ರಯಾಣ ಕಲಾವಿದನಿಗೆ ಬೇಕಾದ ಅನನ್ಯವಾದ ಮನಸ್ಥಿತಿ. ಅದು ಭೂತಕಾಲಕ್ಕಾದರೂ ಸರಿ, ಅಥವಾ ಭವಿಷ್ಯತ್ತಿಗಾದರೂ ಸರಿ, ಕಾಲ ಮತ್ತು ಅನುಭವಗಳೊಂದಿಗಿನ ಗುದ್ದಾಟ (Struggle), ಬಣ್ಣ, ಆಕಾರ ಹಾಗೂ ತರಂಗಗಳಾಗಿ (Colour, Form and Rhythm) ಪರಿವರ್ತನೆಗೊಳ್ಳುತ್ತಾ.... ಖಾಲೀ ಕ್ಯಾನವಾಸನ್ನು ಆವರಿಸುತ್ತಾ ಹೋಗುತ್ತದೆ. ಆದರೆ ಅನುಭವ ಪೂರ್ಣವಾಗಿ ಅಮೂರ್ತವಾದದ್ದು (Abstract) ಎನ್ನುವುದನ್ನು ನಾವೆಲ್ಲಾ ಒಪ್ಪಿಕೊಳ್ಳುತ್ತೇವೆ. ಕೃತಿ ರಚನೆಯ ಸಂದರ್ಭದಲ್ಲಿ ಕಲಾವಿದನ ಸುಪ್ತ ಪ್ರಜ್ಞೆ ಅಥವಾ ಪ್ರಜ್ಞೆ (Subconsious level)ಯ ಅಡಿಯಲ್ಲಿ ನಿರ್ಮಾಣ ಗೊಂಡ ಕೃತಿ ರಚನೆಯ ಸಂದರ್ಭದ ಅನುಭವವನ್ನು ವಿಶ್ಲೇಷಿಸುವಾಗಲೂ ಈ ಕೆಲವು ಅಂಶಗಳು ಗಮನಾರ್ಹವಾಗುತ್ತವೆ. ಅಂದರೆ ಪೂರ್ವ ಅನುಭವದ (part) ತುಲನೆ (measure) ಒಂದು ಕಡೆಗಾದರೆ, ವೃತ್ತಿಪ್ರಜ್ಞೆ, ಮಾಧ್ಯಮದ ಬಗೆಗಿನ ಕಾಳಜಿ (Tension for the Surface) ಈ ಎಲ್ಲಾ ಒತ್ತಡಗಳು ಇನ್ನೊಂದು ಕಡೆ ಪರಸ್ಪರ ಘರ್ಷಣೆಯನ್ನೂ ಸಾಧಿಸುತ್ತವೆ. ಇಂತಹ ಘರ್ಷಣೆಯೇ ಕಲಾವಿದನಿಗೆ ಬೇಕಾದ ಮನಸ್ಥಿತಿಯನ್ನು (mood) ನಿರ್ಮಾಣ ಮಾಡಿಕೊಡುತ್ತದೆ.

ನಂತರದ ಕ್ಷಣಗಳು ನನಗೆ ಅನ್ನಿಸುವ ಹಾಗೆ, ಒಂದು ರೀತಿಯಲ್ಲಿ ವಿಮರ್ಶೆ ಯಾಗುತ್ತಾ ಹೋಗುತ್ತದೆ. ಇಲ್ಲಿ ಈ ಕೆಲವೊಂದು ಮಾತುಗಳನ್ನು ಉಲ್ಲೇಖಿಸ ಬಹುದು. "ಕಲೆ ಬದುಕಿನ ಅಪೂರ್ಣತೆ ಮತ್ತು ಅನಿಶ್ಚಯತೆಗಳ (uncomplete and uncertainity) ವಿರುದ್ಧದ ಪ್ರತಿಭಟನೆ ಎಂದು ಕಾಮು ತಿಳಿಸುತ್ತಾನೆ. ಕಲೆಯು ಇರುವುದರ ಪೂರ್ಣ ಒಪ್ಪಿಗೆಯೂ ಅಲ್ಲ, ಸಂಪೂರ್ಣ ನಿರಾಕರಣೆಯೂ ಅಲ್ಲ. ಕಲೆ ಏಕಕಾಲಿಕ ನಿರಾಕರಣೆ ಮತ್ತು ಒಪ್ಪಿಗೆ. ಆದ್ದರಿಂದಲೇ ಕಲೆ ಸಂಕೀರ್ಣ ಮತ್ತು ಹೊಚ್ಚಹೊಸದು. ಕಲಾವಿದ ಇರುವುದನ್ನು ಸಂಪೂರ್ಣವಾಗಿ ನಿರಾಕರಿಸದೆ, ಅದರ ಅಪೂರ್ಣತೆಯನ್ನಷ್ಟೇ ಪ್ರಶ್ನಿಸುತ್ತಾನೆ. ಎಂದು ಕಾಮು ತಿಳಿಸುತ್ತಾನೆ. [ನವ್ಯ ಕಾದಂಬರಿಯ ಪ್ರೇರಣೆಗಳು–ಪುಟ 12]

ಇಲ್ಲಿ ಕಲಾವಿದ ಅಸಂಗತತೆಯ (uncertainity) ಕ್ಷಣಗಳಿಂದ ತಪ್ಪಿಸಿ ಕೊಳ್ಳುವ ಸಾಧನವನ್ನಾಗಿ ಕಲೆಯನ್ನು ಬಳಸಿಕೊಳ್ಳುತ್ತಿದ್ದಾನೆ ಎನ್ನುವ ಸಂದೇಹ ಮೂಡುವುದು ಸಹಜ. ಅದು ಕೆಲವು ಅಂಶಗಳ ಮಟ್ಟಿಗೆ ನಿಜವೂ ಆದೀತು. ಎಷ್ಟೋ ಸಂದರ್ಭಗಳಲ್ಲಿ ಸಂಕೀರ್ಣ ಸಂಬಂಧಗಳು ಸರಳಗೊಳ್ಳಬಹುದು. ಆದರೆ ಕಲಾವಿದ ಬಣ್ಣಗಳ ಮೂಲಕ ಹುಡುಕುವ ಅರ್ಥ, ಯಾವತ್ತೂ ಅವನ ಕಳೆದ ಅನುಭವಗಳ definition ಆಗುವುದಕ್ಕೆ ಅಥವಾ ಬರಿಯ statement ಆಗುವುದಕ್ಕೆ ಸಾಧ್ಯ ವಿಲ್ಲ. ಯಾಕೆಂದರೆ ಅವನ ಕೃತಿ ಯಾವಾಗಲೂ ವಿಮರ್ಶೆಯಾಗಿದ್ದರೂ ಕೂಡಾ,

ಪ್ರಶ್ನೆ, ಅಚ್ಚರಿ, ಕುತೂಹಲ ಮತ್ತು ನಿಗೂಢ ಆವರಣವಾಗಿಯೇ ಉಳಿದು ಹೋಗುತ್ತದೆ. ಇಲ್ಲಿ ಕಲಾವಿದ ತನ್ನ ಪರಿಸರ, ಕಾಲ ಹಾಗೂ ವೈಯಕ್ತಿಕ ನೆಲೆಗಳ ನಡುವೆ ಸೃಷ್ಟಿಸಿಕೊಳ್ಳುವ ಸಂಬಂಧಗಳು ಅವನಿಗೆ ಪ್ರೇರಣೆಗಳಾಗುವ ಸಾಧ್ಯತೆಗಳಿರುವುದರಿಂದ,

"ಕಲಾವಿದ ತನ್ನ ಕಾಲಕ್ಕೆ ಬೆನ್ನು ತಿರುಗಿಸುವ ಹಾಗಿಲ್ಲ. ಕಾಲವನ್ನು ಒಳಗು ಮಾಡಿಕೊಂಡಷ್ಟೂ ವೈಯಕ್ತಿಕತೆ ಗಟ್ಟಿಯಾಗುತ್ತಾ ಹೋಗುತ್ತದೆ. ಅಂದರೆ ಮಾನವ ಕುಲದಲ್ಲಿ ತನ್ನನ್ನು ತಾನು ಕಂಡುಕೊಳ್ಳುವ ತೀವ್ರ ಸ್ಥಿತಿಯನ್ನು ಮುಟ್ಟುತ್ತಾನೆ. ಕಲೆಯ ಶ್ರೇಷ್ಟತೆ ಯಾವತ್ತೂ ಸೌಂದರ್ಯ ಮತ್ತು ನೋವುಗಳ ಮಾನವ ಪ್ರೇಮ ಮತ್ತು ಸೃಷ್ಟಿಯ ಹುಚ್ಚು. ಏಕಾಂತ ಚಟ್ಟು ಹಿಡಿಸುವ ಗುಂಪು ಹಾಗೂ ನಿರಾಕರಣೆ ಮತ್ತು ಒಪ್ಪಿಗೆಗಳ ನಡುವೆ ನಿಜವಾಗುವಂಥಾದ್ದು. ಸ್ವತಂತ್ರ ಕಲಾವಿದ ಒಬ್ಬ ಸ್ವತಂತ್ರ ಮನುಷ್ಯನಿಗಿಂತ ಹೆಚ್ಚು ಸುಖಿಯಲ್ಲ. [ನವ್ಯ ಕಾದಂಬರಿಯ ಪ್ರೇರಣೆಗಳು–ಪುಟ 13]

ಇದಿಷ್ಟೂ ಒತ್ತಡ, Paintingನ ಭಾಷೆಯ ಮೂಲಕ ಅಭಿವ್ಯಕ್ತಿ ಪಡೆದಾಗ ಆ Painting ಸಂವಹನ ಶೀಲತೆ (communication)ಯನ್ನು ಎಷ್ಟರ ಮಟ್ಟಿಗೆ ಕಾಯ್ದುಕೊಂಡು ಬಂದಿದೆ ಎನ್ನುವುದು. ಅಂದರೆ Painting ಸಂವಹನ ಶೀಲವಾಗಿರಬೇಕೆ ? ಇದ್ದರೆ ಎಷ್ಟರ ಮಟ್ಟಿಗೆ ಇರಬೇಕು ? ನನಗೆ ಅನ್ನಿಸುವ ಹಾಗೆ ನಿಜವಾದ ಯಾವ Painting ಕೂಡಾ ಸಂಪೂರ್ಣವಾಗಿ communicative ಆಗಿರುವುದಿಲ್ಲ. ಹಾಗೆ ಒಂದು ವೇಳೆ ಪೂರ್ಣ communicative ಆಗುವ ಕೃತಿ ಹೆಚ್ಚು ಮಹತ್ವವನ್ನೂ ಉಳಿಸಿಕೊಳ್ಳುವುದಿಲ್ಲ. ಒಂದು ಕೃತಿ ಎಲ್ಲಿಯವರೆಗೆ ಕುತೂಹಲ, ಅಚ್ಚರಿ ಹಾಗೂ ನಿಗೂಢವಾಗಿ ಉಳಿಯುವುದೋ ಅಲ್ಲಿಯವರೆಗೆ ಅದೊಂದು ಅನನ್ಯ ಕೃತಿಯಾಗುತ್ತದೆ.

ಕಲಾವಿದ ತನ್ನ ಅನುಭವಗಳ ಬಗ್ಗೆ ಎಷ್ಟರ ಮಟ್ಟಿಗೆ ಪ್ರಾಮಾಣಿಕನಾಗಿದ್ದಾನೆ ಎನ್ನುವುದೂ ಕೂಡಾ ಅವನ ಕೃತಿಯ ಮೌಲ್ಯವನ್ನೂ ನಿರ್ಧರಿಸುವ ಸಂಗತಿಯಾಗಬಲ್ಲದು. ಟಾಲ್‌ಸ್ಟಾಯ್‌ನ ಪ್ರಕಾರ "Sinciarity– that is, that the artist should be compelled by an inner need to express his feelings as he experienced it. And as each man is differ from any one else, his feelings will be individual for every one else. And the more individual it is the more the artist has drawn it from the depths of his nature. [the communication of emotion– modern book of Aeasthetics]

ಒಂದು painting ಅಥವಾ ಶಿಲ್ಪದಿಂದ ಪೂರ್ಣವಾದ ಅಭಿವ್ಯಕ್ತಿ ಸಾಧ್ಯವೇ ? ಬಹುಶಃ ಒಂದು ಕೃತಿಯ ಮೂಲಕ ಎಲ್ಲ ಅನುಭವಗಳನ್ನೂ ಹೇಳುವ ಸಾಧ್ಯತೆ ಶೂನ್ಯಕ್ಕಿಂತ ಕಡಿಮೆ. ಬದುಕು ಯಾವತ್ತೂ ಅನುಭವಗಳ ನಿರಂತರವಾದ ಹುಡುಕಾಟ, ಆಗಾಗ ಮಿಂಚು ಹೊಳೆದ ಹಾಗೆ ಒಂದು ಚಿತ್ರ ಅಥವಾ ಶಿಲ್ಪದಲ್ಲಿ ಅದು ಕಾಣಿಸಿಕೊಳ್ಳಬಹುದು.

## ಗಿಳಿ–ಗಿಡುಗ

**ಬರಗೂರು ರಾಮಚಂದ್ರಪ್ಪ**
ಪ್ರಾಧ್ಯಾಪಕರು, ಕನ್ನಡ ವಿಭಾಗ, ಜ್ಞಾನ ಭಾರತಿ, ಬೆಂಗಳೂರು

ಗಿಳಿಯೊಳಗೆ ಗಿಡುಗ ಕೂತು
ಊರು ಹಾಳಾಗುವವರೆಗೆ
ಆಕಾಶದಲ್ಲಿ ಹಾರಾಡುತ್ತದೆ.
ಗಿಡುಗ ಒಳಗೊಳಗೇ ಕುಕ್ಕುತ್ತ
ರಕ್ತ ಮಾಂಸಗಳನ್ನು ಬಸಿದಾಗ
ಆಯ ತಪ್ಪಿದ ಆಕಾಶದ ಗಿಳಿ
ತಿಪ್ಪರಲಾಗ ತೂರಾಡುತ್ತದೆ.

ಗಿಳಿಯೊಳಗೆ ಗುಡುಗು ಸಿಡಿಲು ಸ್ಫೋಟಗೊಂಡು
ಚೂರು ಚೂರಾಗಿ ನೆಲ ಕಚ್ಚಿದಾಗ
ಗಿಡುಗ ಗಹ ಗಹಿಸಿ ನಗುತ್ತದೆ.
ಚೂರೆಲ್ಲ ಸೇರಿಸಿ ಮತ್ತೆ ಗಿಳಿಯಾಗುವಾಸೆ
ಮತ್ತೇನು ಕಾದಿದೆಯೊ ಗಿಡುಗ ವರಸೆ ।
ಇದು ನನ್ನ–ವನ್ನ ದೇಶದ ನಕಾಶೆ

# ಕನ್ನಡಿ

**ಕೆ. ಜಯಲಕ್ಷ್ಮಿ**
1662/17-5, 2ನೇ ಕ್ರಾಸ್, ರಾಮಮೋಹನಪುರ, ಬೆಂಗಳೂರು-21

ನಾನು ನಾನಾಗಿ
ಕಾಣುವುದೇ ಇಲ್ಲ
ಒಡೆದ ಗಾಜಿನ ಚೂರುಗಳಲಿ
ಪೂರ್ಣರೂಪ ಮೂಡುವುದೇ ಇಲ್ಲ.

ತಮ್ಮದೇ ರೂಪು ರೇಖೆ
ಭಾವನೆಗಳಿಂದ ಮೆಟ್ಟಿ
ಕಣ ಕಣವನು ಬೇರ್ಪಡಿಸಿ
ಕವಚವನ್ನು ಹೊದಿಸಿ
ನನ್ನತ್ತ ಗುರಿಯಿಟ್ಟು ಬಿಟ್ಟು
ನಿಂತ ಮಾಟಕ್ಕೆ
ಬೆರಗಾಗಿದ್ದೇನೆ.

ಇಟ್ಟ ಹೆಜ್ಜೆಯ ದಿನ ಮಣ್ಣಿನಲ್ಲಿ
ಕೊಳಕಿನಾ ಕಣಗಳೂ ಹೊಳೆದಾಗ
ಅಚ್ಚರಿಗೊಂಡಿದ್ದೇನೆ.
ಮನಸೆಳೆವ ಹೂಬನಕೆ
ಕಿಚ್ಚಿಟ್ಟು ನಕ್ಕಾಗ
ಆ ಉರಿಯಲ್ಲೇ ಕುದ್ದು ಹೊರಬರದ
ರೋಷದಲಿ ಸೊರಗಿದ್ದೇನೆ
ಒಮ್ಮೊಮ್ಮೆ ಹಿಗ್ಗುತ್ತ
ಕುಗ್ಗುತ್ತ ಮತ್ತೊಮ್ಮೆ
ಹಾದಿಯ ಸವೆಸಿದ್ದೇನೆ.

ಆದರೂ
ನಾನು ನಾನಾಗಿ
ಕಾಣುವುದೇ ಇಲ್ಲ.

ಡಾ॥ ಯು. ಆರ್. ಅನಂತಮೂರ್ತಿಯವರ

# 'ಅಜ್ಜನ ಹೆಗಲ ಸುಕ್ಕುಗಳು' : ಒಂದು ನೋಟ

**ಅಶೋಕಕುಮಾರ ರಂಜೇರೆ**
ಮೊದಲ ಎಂ.ಎ. ಜ್ಞಾನಭಾರತಿ, ಬೆಂಗಳೂರು

ಈಗಾಗಲೇ ಕಥೆಗಾರರಾಗಿ, ಕಾದಂಬರಿಕಾರರಾಗಿ ಮತ್ತು ವಿಮರ್ಶಕರಾಗಿ ನಮ್ಮ ನಡುವಿನ ಸಾಹಿತ್ಯ ಲೋಕದಲ್ಲಿ ಚಿರಪರಿಚಿತರಾಗಿರುವ ಡಾ॥ ಯು. ಆರ್. ಅನಂತಮೂರ್ತಿಯವರು 'ಅಜ್ಜನ ಹೆಗಲ ಸುಕ್ಕುಗಳು' ಎಂಬ ಕವನ ಸಂಕಲನವನ್ನು ಹೊರತರುವ ಮುಖಾಂತರ ತಮ್ಮ ಹೆಸರನ್ನು ಕಾವ್ಯ ಪ್ರಪಂಚದಲ್ಲಿ ದಾಖಲಿಸಿದ್ದಾರೆ. 'ಕವಿತೆ ತನ್ನ ಪಾಲಿಗೆ ಕೆಲವು ಕಾಲ ಹಿಡಿದಿದ್ದು ಬಿಟ್ಟು, ಮತ್ತೆ ಬರಬಹುದಾದ್ದು' ಎಂದು ಅವರೇ ಹೇಳಿದಂತೆ ಇಪ್ಪತ್ತು ವರ್ಷಗಳ ಹಿಂದೆ 'ಹದಿನೈದು ಪದ್ಯಗಳು' ಎಂಬ ಕವನ ಸಂಕಲನ ಹೊರ ತಂದಿದ್ದರೂ ಕವಿಯಾಗಿ 'ಅಜ್ಜನ ಹೆಗಲ ಸುಕ್ಕುಗಳು' ಎಂಬ ಇತ್ತೀಚೆಗೆ ಬಿಡುಗಡೆಯಾದ ಕವನ ಸಂಕಲನದಿಂದ ಗುರುತಿಸಲು ಸಾಧ್ಯವಾಗಿದೆ.

ಸಾಹಿತ್ಯವನ್ನು ಆಳವಾಗಿ ಅಧ್ಯಯನಿಸಿರುವ ಅನಂತಮೂರ್ತಿಯವರು ಏನೇ ಬರೆದರೂ ಅದರ ಬಗ್ಗೆ ನಮ್ಮಲ್ಲಿ ಕುತೂಹಲ ಮೂಡಿಸುತ್ತದೆ. 'ವರ್ತಮಾನದ ನೆಲೆಯಿಂದ ಭೂತವನ್ನು ಅವಲೋಕಿಸುತ್ತ ಭವಿಷ್ಯತ್ ಕಡೆ' ಚಿಂತಿಸುವುದು ಇವರ ಎಲ್ಲ ಕೃತಿಗಳ ಲಕ್ಷಣವಾಗಿದೆ. ಈ ಕವನ ಸಂಕಲನದಲ್ಲಿ ವರ್ತಮಾನಕ್ಕೆ ಸಂಬಂಧಿಸಿದ ಮಾಹಿತಿಗಳು ಧಾರ್ಮಿಕ, ಸಾಮಾಜಿಕ, ಆರ್ಥಿಕ ಹಾಗು ರಾಜಕೀಯ ಚಿಂತನೆಗಳು, ಲೈಂಗಿಕತೆ (ಕೌಟುಂಬಿಕ ಜೀವನ), ಮನುಷ್ಯನ ಧೋರಣೆಗಳು, ವ್ಯಕ್ತಿ ವಿಮರ್ಶೆ ಇತ್ಯಾದಿ ವಿಷಯಗಳೇ ಕವಿತೆಗಳಾಗಲು ಪ್ರಯತ್ನಿಸಿವೆ. (ಕೆಲವು ಕವಿತೆಗಳಾಗಿವೆ.).

ಈ ಸಂಕಲನದ ಶೀರ್ಷಿಕೆ "ಅಜ್ಜನ ಹೆಗಲ ಸುಕ್ಕುಗಳು" ಕವಿತೆಯಲ್ಲಿ ನಮ್ಮ ಸಂಸ್ಕೃತಿ ಮತ್ತು ಪರಂಪರೆಯ ಬಗ್ಗೆ ಮಾತನಾಡುತ್ತ, ನಾವು ಎಷ್ಟೇ ಆಧುನಿಕ (Modernise) ಆದರೂ ಸಹ ನಮ್ಮ ಅಜ್ಜನ ಕಾಲದ ಸಂಸ್ಕೃತಿಯ ಪ್ರಭಾವ ನಮ್ಮ ಮೇಲೆ ಇದ್ದೇ ಇರುತ್ತದೆ. ಈ ಮಾತು ನಮ್ಮ ಅಜ್ಜನಿಗೆ ಹೋಲಿಸಿದರೆ, ಅವನು ಅವರಜ್ಜನ ಸಂಸ್ಕೃತಿಯ ಪ್ರಭಾವಕ್ಕೊಳಗಾದರೆ, ನಮ್ಮ ಮೊಮ್ಮಕ್ಕಳಿಗೆ ಹೋಲಿಸಿದಾಗ, ಆತ ನಮ್ಮ ಸಂಸ್ಕೃತಿಗೆ ಒಳಗಾಗುತ್ತಾನೆ ಎನ್ನುವುದೇ ಇದರ ತಾತ್ಪರ್ಯ. ಈ ಮಾತಿಗೆ ಈ ಕೆಳಗಿನ ಕೆಲವು ಸಾಲುಗಳು ಉದಾಹರಣೆಯಾಗಿ ನೋಡಬಹುದು,

ಹಿಡಿದು ಅಜ್ಜನ ಜುಟ್ಟು–ಸವಾರಿ
ಆನೆ ಮೇಲಂಬಾರಿ

ಅವನದೂ ಅವನ ಅಜ್ಜನ ಹೆಗಲ ಮೇಲೆ
ಹೀಗೆ ನನ್ನ ಹಾಗೇ

ಚಡ್ಡಿ ಜೇಬಲ್ಲಿ ಬಚ್ಚಿಟ್ಟು ಹಲವು ಗುಟ್ಟು
ಹಿಡಿದು ಅಜ್ಜನ ಜುಟ್ಟು–ಸವಾರಿ
ಆನೆ ಮೇಲಂಬಾರಿ

ಅಜ್ಜನಜ್ಜನದು ತನ್ನ ಅಜ್ಜನ ಹೆಗಲ ಮೇಲೆ
ಹೀಗೇ, ನನ್ನ ಹಾಗೇ ಕಾಡಲ್ಲಿ
ಹಿಡಿದು ಅಜ್ಜನ ಜುಟ್ಟು–ಸವಾರಿ
ಆನೆ ಮೇಲಂಬಾರಿ

(ಅಜ್ಜನ ಹೆಗಲ ಸುಕ್ಕುಗಳು)

ಈ ಕವನ ಸಂಕಲನದ ಕವಿತೆಗಳ ರಚನೆಗೆ ಪ್ರೇರಣೆ ನೀಡಿರುವ ವಸ್ತುಗಳಲ್ಲಿ ವ್ಯಕ್ತಿ ಕೇಂದ್ರಿತ ಕವಿತೆಗಳು ಹೆಚ್ಚಾಗಿವೆ. ಈ ರೀತಿಯ ಕವಿತೆಗಳು, ಐತಿಹಾಸಿಕ ವ್ಯಕ್ತಿಗಳು (ಮಾರ್ಕ್ಸ್, ಗಾಂಧಿ, ನೆಹರು, ರೇಗನ್, ನಿಕ್ಸನ್, ರಾಯ್ ಎಡುತಚ್ಚನ್ ಪಂಪ, ರನ್ನ...) ಹಾಗೂ ನಮ್ಮ ನಡುವೆಯೇ ಇರುವಂಥ (ಅಡಿಗರು, ಎನ್.ಟಿ.ಆರ್. ರಾಜಕುಮಾರ್, ಎಂ. ಜಿ. ಆರ್., ಬೊಮ್ಮಾಯಿ...) ವ್ಯಕ್ತಿಗಳನ್ನ ಕುರಿತಿವೆ. ಉದಾಹರಣೆಗೆ ರಾಯ್ ಅವರನ್ನು ಕುರಿತ ಈ ಕವನವನ್ನು ನೋಡಬಹುದು. (ರಾಯ್ ಅವರೂ ಸಹ ಪರಂಪರೆಯ ಪ್ರಭಾವಕೆ ಹೇಗೆ ಒಳಗಾಗಿದ್ದಾರೆ ಎಂಬುದನ್ನೂ ಈ ಸಾಲುಗಳು ಹೇಳುತ್ತವೆ.)

ಎಷ್ಟು ರಾಯ್ ಬದಲಾದರೂ ಪೂರ್ವದ ವಾಸನೆ ಅವನ್ನ ಬಿಡಲೇ ಇಲ್ಲ
ಏಕ ಮೇವ ಸಿದ್ಧಾಂತದಲ್ಲಿ ಬಹುವಚನಗಳ ಲೋಕಸತ್ಯವನ್ನ
ಹಿಡಿದು ವಿವರಿಸಬೇಕೆನ್ನುವ ಅವನ ಹಠ
ಮೂಲತಃ ಟೊಟಾಲಿಟೇರಿಯನ್ ಎಂದು
ಅವನ ಬಣದವರೇ ಆದ
ಎಬಿಶಾ ವಾದಿಸಿದ್ದರು, ಅಂತ ನೆನಪು.

(ಗುರುರಾಯ)

ಡಾ॥ ಯು. ಆರ್. ಅನಂತಮೂರ್ತಿಯವರು ಬೇರೆಯವರಿಗಿಂತ ವಿಶಿಷ್ಟ ಕವಿ ಎಂದು ಕರೆಯಲು ಅವರು ಬಳಸುವ ನಿಗೂಢತೆ, ದ್ವಂದ್ವತೆ ಕಾರಣವಿರಬಹುದು ಎನಿಸುತ್ತದೆ. ಒಮ್ಮೊಮ್ಮೆ ಇದು ಕಾವ್ಯ ಲೋಕದಲ್ಲಿ ಒಂದು ರೀತಿಯ ಪ್ರಯೋಗವೇ ಎಂದರೂ ತಪ್ಪಾಗಲಾರದು. ಉದಾಹರಣೆಗೆ ರಾಮನೋ–ಕೃಷ್ಣನೋ ಕವಿತೆ ಕೇರಳದ

ಕವಿ ಎಡುತಚ್ಚನ್ ಜನ್ಮ ದಿನವನ್ನು ಕುರಿತದ್ದು ಎಂದು ಹೇಳಿದರೂ ವಿಷಯ ಬಿಟ್ಟು ಪೌರಾಣಿಕ ಮತ್ತು ಇತಿಹಾಸಗಳ ನಡುವೆ ಕೊಂಡಿ ಕಳಚಿ ಲೀನವಾಗುತ್ತದೆ ಮತ್ತು ಬಹುತೇಕ ವಿಷಯಗಳು ಈಗಾಗಲೇ ಪುರಂದರ ಕನಕ, ವಚನಕಾರರು ಹಾಗು ನಮ್ಮ ಜನಪದ ಕಥೆಗಳಲ್ಲಿ ಪ್ರತಿಪಾದಿತವಾಗಿರುವ ಸರಳತೆ ಹಾಗು ಮುಗ್ಧತೆ ಶ್ರೀ ಸಾಮಾನ್ಯ ಪರವಾದ ಧೋರಣೆಗಳು ಮತ್ತೆ ಇವರ ಕವಿತೆಗಳಲ್ಲಿ ಕಂಡುಬರುತ್ತದೆ. ಈ ರೀತಿಯ ಧೋರಣೆ ಭಕ್ತಿ–ವಿಭಕ್ತಿ, ಶ್ರೀ ತುಳಸಿ ಮತ್ತಿತರ ಕವನಗಳಲ್ಲಿ ಕಾಣಬಹುದು.

ಪ್ರಸ್ತುತ ಬದುಕನ್ನು ಬಡವ–ಧನಿಕ, ಸಂಸಾರ, ಹೊಟ್ಟೆ, ಈಶಯ್ಯೆ, ಮೊದಲ ಸಲವಲ್ಲ ಹೀಗೆ ಕೆಲವು ಕವನಗಳಲ್ಲಿ ಪ್ರಸ್ತುತ ವಾಸ್ತವ ಬದುಕನ್ನು ಚಿತ್ರಿಸಲಾಗಿದೆ. ಬಡವ–ಧನಿಕ ಕವಿತೆಯಲ್ಲಿ ಬಡವ ಮತ್ತು ಶ್ರೀಮಂತರ ಆಸೆ, ಆಕಾಂಕ್ಷೆ ಇವರ ಸ್ಥಿತಿಗತಿಯನ್ನು ತಿಳಿಸುತ್ತದೆ. ಹಾಗೆಯೇ 'ಸಂಸಾರ' ಕವನ. ಸಂಸಾರದಲ್ಲಿ ಗಂಡ ಹೆಂಡತಿಯ ಸಂಬಂಧ ಮಕ್ಕಳ ಪಾಲನೆ ಪೋಷಣೆ ತಿಳಿಸಿದರೆ 'ಹೊಟ್ಟೆ' ಕವನ ಮನುಷ್ಯನಿಗೆ ಹೊಟ್ಟೆ ಏನು ಬೇಕಾದರೂ ಮಾಡಿಸುತ್ತದೆ. 'ಉದರ ನಿಮಿತ್ತಂ, ಬಹುಕೃತ ವೇಷಂ' ಆಹಾರಕ್ಕಾಗಿ ಇಡೀ ಪ್ರಾಣ ಪಡೊ ತಹತಹಾನ ಅದು ತನ್ನದೇ ಅನ್ನೋಹಾಗೆ ಹಸಿಯುತ್ತೆ. ಹೀಗೆ ನಮ್ಮ ಪ್ರಸ್ತುತ ಬದುಕಿನ ಪ್ರತಿಬಿಂಬಗಳೇ ಕವಿತೆಗಳಾಗಿವೆ ಎನಿಸುತ್ತದೆ.

ಇತರೇ ಕವಿಗಳ ಹಲವಾರು ಕವಿತೆಗಳಲ್ಲಿ ಕೇರಳವನ್ನು ಕಂಡಿದ್ದರೂ ಅನಂತ ಮೂರ್ತಿಯವರ ಕವಿತೆಗಳಲ್ಲಿ ಕಂಡುಬರುವ ಕೇರಳವೇ ಬೇರೆ. ಉದಾಹರಣೆಗೆ 'ಕೊಟ್ಟಾಯಂನಲ್ಲಿ ಕ್ರಿಸ್‌ಮಸ್', ಮತ್ಸ್ಯಾವತಾರ' ಮತ್ತಿತರ ಕವನಗಳಲ್ಲಿ ನೋಡ ಬಹುದು.

ಈ ಸಂಕಲನದ ಕವಿತೆಗಳನ್ನು ಅನಂತಮೂರ್ತಿಯವರು ತಾವೇ ಹೇಳಿದಂತೆ 'ತಮ್ಮ ಎಲ್ಲ ಕವಿತೆಗಳು ಶುದ್ಧ ಕಾವ್ಯ ಎನ್ನುವುದು ಪ್ರಸ್ತುತವಲ್ಲ' ಎಂಬುದು ಟಿ. ಪಿ. ಅಶೋಕ ತಮ್ಮ ಲೇಖನದಲ್ಲಿ 'ಶುದ್ಧ ಕಾವ್ಯ' ಮತ್ತು ಪ್ರಬಂಧ ಕಾವ್ಯ' ಎಂದು ಭಾಗ ಮಾಡಿರುವುದು ಅಷ್ಟೇ ಸಮಂಜಸವಾದುದು ಎನಿಸಿದರೂ ಇಲ್ಲಿನ ಕೆಲವು ಕವಿತೆಗಳು ತೀರ ಸಾಮಾನ್ಯ ಕವಿತೆಗಳಂತೆ ಕಂಡುಬರುತ್ತವೆ.

ಒಟ್ಟಾರೆ ಸಂಕಲನವನ್ನು ಓದಿ ಮುಗಿಸಿದಾಗ ವಿಭಿನ್ನ ಅನುಭವವಾಗುತ್ತದೆ. ಕಾವ್ಯ ಸ್ವಾದನೆಗಿಂತ ಮುಖ್ಯವಾಗಿ ಅನಂತಮೂರ್ತಿಯವರ ಮನಸ್ಸು ಮತ್ತೊಮ್ಮೆ ನಮ್ಮನ್ನು ಚಿಂತನೆಯತ್ತ ತಳ್ಳುತ್ತದೆ.

**ಆಧಾರ :**

1. ಯು. ಆರ್. ಅನಂತಮೂರ್ತಿಯವರ 'ಅಜ್ಜನ ಹೆಗಲ ಸುಕ್ಕುಗಳು'
ಟಿ. ಪಿ. ಅಶೋಕ

2. ಹೆಚ್. ಎಸ್. ವೆಂಕಟೇಶ್ ಮೂರ್ತಿಯವರ ಮುನ್ನುಡಿ.

# ಪರಿಣಾಮ

ಟಿ. ಯಲ್ಲಪ್ಪ
ಮೊದಲ ಬಿ.ಎ. ಆಚಾರ್ಯ ಪಾಠಶಾಲೆ ಕಾಲೇಜು
ನ. ರಾ. ಕಾಲೋನಿ, ಬೆಂಗಳೂರು-19

ಅಪ್ಪ ಹಸಿದಾಗ
ಅಮ್ಮನ ಕಡೆ ನೋಡುತ್ತಾನೆ.
ಅಮ್ಮ ಊಟ ಬಡಿಸೊಲ್ಲ
ತುಟಿಯಂಚಲಿ ಕಿಸಕ್ಕನೆ ನಗುತ್ತಾಳೆ.

ನನಗೆ ಭಯವಾಗುತ್ತದೆ
ರಗ್ಗಿನೊಳಗೆ ನುಸುಳಿಕೊಳ್ಳುತ್ತೇನೆ

ಒಂದು ದಿನ
ಅಮ್ಮ ವಾಕರಿಸುತ್ತಾಳೆ
ಅಪ್ಪ ಹಸಿರು ಮಾವಿನ ಕಾಯಿ
ಹಿಡಿದು ಬರುತ್ತಾನೆ.

ಮತ್ತೊಂದು ದಿನ
ದನದ ಕೊಟ್ಟಿಗೆಯಲ್ಲಿ
ಅಂಬಾ ಧ್ವನಿಯೊಡನೆ
ಮಾಂಸದ ಮುದ್ದೆಯೊಂದು
ಚೀರಾಡುತ್ತದೆ.

ಒಂದಷ್ಟು ದಿನ ಬಿಟ್ಟು
ನನ್ನ ತಟ್ಟೆಯಲ್ಲಿನ ಹಿಟ್ಟು
ಸಣ್ಣದಾಗುತ್ತದೆ.

ಸಣ್ಣ ಕಥೆ

# ಗೊಂದಲ

ನೋಹನ್ ವರ್ಣೇಕರ್
110, 4ನೇ ಮಾಡಲ್‌ಹೌಸ್ ಸ್ಟ್ರೀಟ್
ಬಸವನಗುಡಿ, ಬೆಂಗಳೂರು_560 004

ಥಟ್ಟನೆ ನೆನಪಾಯಿತು. ಹೊರಡುವ ಅವಸರದಲ್ಲಿ ತುಂಬಿದ ಪರ್ಸನ್ನು ಟೇಬಲ್ ಮೇಲೆಯೇ ಬಿಟ್ಟು ಬಂದಿದ್ದೆ. ಕಂಡಕ್ಟರ್ ಹತ್ತಿರಕ್ಕೆ ಬಂದು 'ಎಲ್ಲಿಗೆ' ಎಂದು ಕೇಳಿದಾಗ ಹೃದಯವೇ ಕಿತ್ತು ಬಾಯಿಗೆ ಬಂದಂತಾಗಿತ್ತು. ನಿಧಾನಿಸುವಂತಿಲ್ಲ ಒಡನೆ 'ವಿಧಾನಸೌಧ' ಎಂದಷ್ಟೇ ಹೇಳಿ ಸ್ವಾಭಾವಿಕವಾಗಿ ಎನ್ನುವಂತೆ ಹಿಂದಿನ ಜೇಬಿಗೆ ಕೈಹಾಕಿ 'ಅಯ್ಯೋ ನನ್ನ ಪರ್ಸ್' ಎಂದು ಕೂಗಿದೆ. ಮಿಶ್ರಪ್ರತಿಕ್ರಿಯೆಗಳು ಕೇಳಿಬರತೊಡಗಿದವು. ಹಿರಿತಲೆಗಳು ಬುದ್ಧಿವಾದಕ್ಕೆ ತೊಡಗಿದವು. ಕೆಲವರು ತಮ್ಮ ಅನುಭವಗಳನ್ನು ಹೇಳಲು ಪ್ರಾರಂಭಿಸಿದರು.

ಸಫಾರಿ ಡ್ರೆಸ್‌ನಲ್ಲಿ ಲಕ್ಷಣವಾಗಿ ಕಾಣುತ್ತಿದ್ದ ನನಗೆ ಕಂಡಕ್ಟರ್ ಟಿಕೇಟ್ ಏನೋ ಕೊಟ್ಟುಬಿಟ್ಟಿದ್ದ. ಈಗ ದುಡ್ಡು ಕೊಡುವ ಸ್ಥಿತಿಯಲ್ಲಿ ನಾನಿಲ್ಲ. ಆತನಿಗೆ ಇದು ಸಮಸ್ಯೆಯಾಗಿ ತೋರಿರಬೇಕು. ನನ್ನ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದ ಆತನಿಗೆ ಎದುರಿಗೆ ನಿಂತಿದ್ದ ಆಕೆಯೇ ಮುಂದಾಗಿ 'ಅವರ ಟಿಕೇಟಿನ ದುಡ್ಡು ನಾನು ಕೊಡ್ತೇನೆ' ಎಂದು ಒಂದು ರೂಪಾಯಿ ನೋಟನ್ನು ಅವನತ್ತ ಚಾಚಿದಳು. ಬದುಕಿದೆಯೊ ಬಡಜೀವವೇ ಎಂದು ಕಣ್ಣಲ್ಲೇ ಅವಳಿಗೆ ಥ್ಯಾಂಕ್ಸ್ ಹೇಳಿದೆ.

ವಿಧಾನಸೌಧದಲ್ಲಿ ನಿಂತ ಬಸ್ಸಿನಿಂದ ಎಲ್ಲರೂ ಇಳಿದಾಗ ಆಕೆಯೂ ಮುಂದಿನ ಬಾಗಿಲಿನಿಂದ ಇಳಿದಳು. ಒಮ್ಮೆ ನನ್ನತ್ತ ನೋಡಿ ಮುಗುಳ್ನಕ್ಕು ಗೆಳತಿಯೊಡನೆ ಹೆಜ್ಜೆ ಹಾಕಿದಳು. ಪರ್ಸು ಮರೆತು ಬಂದಿದ್ದು ಒಳಿತೇ ಆಯಿತೆಂದು ಮಧುರ ಭಾವನೆಗಳಿಂದಾವೃತನಾಗಿ ನಾನೂ ಹೆಜ್ಜೆ ಹಾಕತೊಡಗಿದೆ.

ಪ್ರತಿದಿನ ಎನ್. ಆರ್. ಕಾಲೋನಿಯಿಂದ ಹೊರಡುವ ಬಸ್ಸಿನಲ್ಲಿ ಅವಳನ್ನು ನೋಡುತ್ತೇನೆ. ಹೆಸರು, ವಿಳಾಸ ಗೊತ್ತಿಲ್ಲ. ದಿನವೂ ನೋಡಿ ನೋಡಿ ಮುಖವಂತೂ ಪರಿಚಿತವಾಗಿಬಿಟ್ಟಿದೆ. ಆಕೆಯೂ ಆಗಾಗ ನನ್ನತ್ತ ನೋಡಿದ್ದುಂಟು. ಆದರೆ ಮುಗುಳ್ನಕ್ಕಿದ್ದು ಮಾತ್ರ ಇದೇ ಮೊದಲ ಸಲ.

ಬೆಳಗಿನ ಘಟನೆ ಪ್ರೇಮಾಂಕುರಕ್ಕೆ ಎಡೆಕೊಡಬಹುದೆಂದು ಗೆಳೆಯ ರಮೇಶ ಚುಡಾಯಿಸಿದಾಗ ತೋರಿಕೆಗೆ ರೇಗಿದರೂ ಮನಸ್ಸು ಯೋಚಿಸುತ್ತಲೇ ಇತ್ತು. ಯಾಕಾಗಬಾರದು ? ಗರಿಗೆದರಿದ ಮನಸ್ಸಿನಲ್ಲಿ ನವಿರಾದ ಭಾವನೆಗಳು ಚುಮುಚುಮು ಎನ್ನತೊಡಗಿದವು. ಛೆ, 'ಉಪಕಾರವಾಯಿತು' ಎಂದು ನಾನು ಹೇಳಬೇಕಾಗಿತ್ತು. ಯಾಕೆ ಹೇಳಲಿಲ್ಲ ? ಭಾವನೆಗಳ ತಾಕಲಾಟದಲ್ಲಿ ಮಾತು ಮರೆತುಹೋಗಿತ್ತೇನೊ. ಆಯಿತು, ನಾಳೆ ಬೆಳಗ್ಗೆ ತಪ್ಪದೆ ಹೇಳಬೇಕು. ಆಕೆಯನ್ನು ಮಾತನಾಡಿಸಲು ಅದು ಸರಿಯಾದ ಸಂದರ್ಭ ಎಂದು ನಿರ್ಧರಿಸಿದೆ.

ಮಧ್ಯಾಹ್ನ ವಿರಾಮ ವೇಳೆಯಲ್ಲಿ ಕ್ಯಾಂಟೀನ್‌ಗೆ ಹೋಗಿ ಬಂದಾಗ, ತಂಗಿ ಬಂದು ಕುಳಿತಿದ್ದಳು. ಮರೆತುಬಂದಿದ್ದ ನನ್ನ ಕೈಗೆ ಕೊಟ್ಟು "ಅಲ್ಲಿ ಫ್ರೆಂಡ್ಸ್ ಇರ್‍ತಾರೆ, ಪರ್‍ವಾಗಿಲ್ಲಮ್ಮ ಅಂತ ಹೇಳಿದ್ರೂ ಕೇಳ್ಲಿಲ್ಲ. ನಿನ್ನೆಯಷ್ಟೇ ಸಂಬಳ ಬಂದಿದೆ. ಯಾರ್‍ಯಾರಿಗೆ ಕೊಡ್ಬೇಕೊ ಏನೋ, ಮೊದಲು ಕೊಟ್ಟುಬಾ" ಅಂತ ಹೇಳಿದ್ಲು. ಇಲ್ಲಿಗೆ ಬಂದ್ರೆ ನೀನು ಇರ್‍ಲಿಲ್ಲ. ನನ್ನ ಫ್ರೆಂಡ್ ಒಬ್ಳು ಎ. ಜಿ. ಆಫೀಸ್‌ನಲ್ಲಿದ್ದಾಳೆ. ಅವಳನ್ನು ಮಾತಾಡ್ಸಿಕೊಂಡು ಬಂದೆ" ಎಂದ ಆಕೆಯನ್ನು "ಆಕೆ ಯಾರು, ಯಾವ ಸೆಕ್ಷನ್ ?" ಎಂದು ಕೇಳಿದೆ. "ಹೇಮಾವತಿ ಅಂತ. ಸೆಕ್ಷನ್ ಗೊತ್ತಿಲ್ಲ. ರೂಮಿನ ನಂಬರು ಗೊತ್ತಿತ್ತು. ಫೋಟೋ ನೋಡ್ತಿಯಾ ಅವಳೇ ಕೊಟ್ಟಿದ್ದು" ಎಂದು ಪರ್ಸಿನಿಂದ ಫೋಟೊ ತೆಗೆದು ತೋರಿಸಿದಳು.

ನೋಡಿ ಅವಕ್ಕಾದೆ. ಆಕೆ ಅದೇ ಹುಡುಗಿಯಾಗಿದ್ದಳು ! ಅವಳು ನನ್ನ ತಂಗಿಯ ಸ್ನೇಹಿತೆ ಎನ್ನುವ ವಿಷಯ ಬಹಳ ಖುಷಿ ಕೊಟ್ಟಿತು.

"ನಾನು ಪರ್ಸ್ ಮರೆತು ಬಂದಿದ್ದನ್ನು ಆಕೆಗೆ ಹೇಳಿದ್ಯಾ ?" ಏನೋ ನೆನಪಾದವನಂತೆ ಥಕ್ಕನೆ ಕೇಳಿದೆ.

"ಹೂಂ, ನಾನು ನಿನ್ನ ಬಗ್ಗೆ ಹೇಳಿದ್ದಕ್ಕೆ ನೀನು ಯಾರು, ಹೇಗಿದ್ದಿ ಅಂತ ವಿಚಾರ್‍ಸಿ ತಿಳ್ಕೊಂಡು 'ಅವ್ರ, ನೋಡಿದ್ದೀನಿ ಬಿಡು, ಎಂದಳು. ಅಂದ್ರೆ ನಿನ್ಗೆ ಅವ್ಳು ಗೊತ್ತಾ ?" ಎಂದು ಪ್ರಶ್ನಿಸಿದ ನನ್ನ ತಂಗಿಗೆ ಏನು ಹೇಳಬೇಕೆಂದು ತೋರದೆ ಚಡಪಡಿಸಿದೆ. ಹೇಮಾವತಿ ಕಣ್ಮುಂದೆ ತೇಲಿ ಬಂದಳು. ಗೊಂದಲ ಕೋಪದಲ್ಲೇ ನಾನು ಹಂತ ಹಂತವಾಗಿ ಜಾರತೊಡಗಿದ್ದೆ.

## 'ಬನ್ನಿ'

ಹಾ. ವಿ. ಮಂಜುಳಾ ಶಿವಾನಂದ್

ನೆಲ ಹೊಕ್ಕ ಬೀಜಗಳೇ
ಮಣ್ಣ ಕಸುವನು ಹೀರಿ
ಮೇಲೆದ್ದು ಬನ್ನಿ
ಹಸಿದ ರೈತನ ಕಣ್ಣಲ್ಲಿ
ಮೊಳಿಕೆ ಯೊಡೆಯಲಿ ಹರುಷ
ಸೀಯದೆ, ಬೇಯದೆ
ಮೇಲೆದ್ದು ಬನ್ನಿ
ನಿಮಗಾಗಿ ತೇಯುವನು
ದೇಹದಾ ಕಸುವೆಲ್ಲಾ ..
ನೀರ ಮೇಲೆದ್ದ
ಕರಿಮುಗಿಲುಗಳೇ
ಬಾಗಿ ಬಾಗಿ
ನೆಲದೆಡೆಗೆ
ಕೂಗಿ ಕರೆದಿಹನು ಹಸಿದ ಕಣ್ಣಿಂದ
ಮೊಳಕೆಯೊಡೆವಾ ಚಿಗುರಿಗೆ
ಪ್ರಾಣ ನೀಡೆಂದು
ದೇಹದಾ ಬೆವರ ಸುರಿಸಿ
ನಿಮಗಾಗಿ ನೀಡುವನು
ಹಚ್ಚ ಹಸಿರ ನೆಲಹಾಸ

**ಶುಭಾಶಯಗಳೊಂದಿಗೆ :**

ಹಳಿಯ ಭಕ್ತಿ ಶ್ರದ್ಧೆಯಳಿಸಿಹೋಗಿವೆ ಮಾಸಿ ।
ಸುಳಿದಿಲ್ಲವಾವ ಹೊಸ ದರ್ಶನದ ಹೊಳಪುಂ ॥

ಪಳಗಿದ್ದ ಮನೆ ಬಿದ್ದ ಕುಂಟ ಕುರುಡನ ತೆರದಿ ।
ತಳಮಳಿಸುತಿದೆ ಲೋಕ – ಮಂಕುತಿಮ್ಮ ॥

**–ಓರ್ವ ಸಂಚಯದ ಹಿತೈಷಿ**

---

